(ರಾಜನು ವಿಧಿವತ್ತಾಗಿ ರಾಮಾನುಜರ ಪಾದಪೂಜೆ ಮಾಡುವನು.)

ಮಹಾರಾಜ—ನಾವು ಇಂದಿನಿಂದ ಶ್ರೀಮನ್ನಾರಾಯಣನ ಆರಾಧಕರಾಗಿ ವೈಷ್ಣವ ಮತದ ದೀಕ್ಷೆಯನ್ನು ಪಡೆಯುವೆವು ಗುರುಗಳೇ ಅನುಗ್ರಹಿಸಿ.

ಯಾದವ—ಹಾಗೇ ಆಗಲಿ, ಮಹಾರಾಜರೇ ನಮಗಿನ್ನು ವೇಳೆ ಆಯಿತು. ನಾವಿನ್ನು ಬರುತ್ತೇವೆ ರಾಮಾನುಜಾ ಬಾ ಹೋಗುವಾ.

ಮಹಾರಾಜ—ಮಂತ್ರಿಗಳೆ, ಎಲ್ಲರನ್ನು ರಾಜ ಮರ್ಯಾದೆಯೊಡನೆ ಪಲ್ಲಕ್ಕಿಯಲ್ಲಿ ಕಳುಹಿಸಿಕೊಡಿ.

ಮಂತ್ರಿ—ಅಪ್ಪಣೆ ಮಹಾಸ್ವಾಮಿ

(ಎಲ್ಲರೂ ಹೊರಡುವರು)

(ತೆರೆ ಬೀಳುವುದು)



# ಅಂಕ—೨

## ದೃಶ್ಯ—೧

(ಯಾದವಪ್ರಕಾಶರ ಮಠ ಯಾದವರು ಒಂದು ಉನ್ನತ ಪೀಠದ ಮೇಲೆ ಕುಳಿತಿರುವರು ಶಿಷ್ಯರು ಕೆಳಗೆ ಕುಳಿತು ಗುರುಗಳ ವ್ಯಾಖ್ಯಾನವನ್ನು ಕೇಳಿಸಿಕೊಳ್ಳುತ್ತಿರುವರು ಆದರೆ ರಾಮಾನುಜರ ಮುಖದಲ್ಲಿ ಮಾತ್ರ ಗುರುಗಳ ವ್ಯಾಖ್ಯಾನ ಸರಿಯಲ್ಲ ಎಂಬ ಭಾವ ಮೂಡುತ್ತದೆ.)

ಯಾದವ—ಕೇಳಿ ವಿದ್ವನ್ಮಣಿಗಳೇ ಈದಿನ ನಿಮಗೆ 'ಸರ್ವಂಖಲ್ವಿದಂಬ್ರಹ್ಮಂ' ಮತ್ತು "ನೇಹನಾನಾಸ್ತಿಕಿಂಚನ," ಎಂಬ ಉಪನಿಷದ್ವಾಕ್ಯಗಳನ್ನು ತಿಳಿಯಪಡಿಸುತ್ತೇನೆ ಸರ್ವಂ ಖಲ್ವಿದಂ ಬ್ರಹ್ಮಂ" ಎಂದರೆ ಎಲ್ಲವೂ ಬ್ರಹ್ಮವೇ. ಬ್ರಹ್ಮ ಎಂಬುದೇ ಸರಿ. ಬ್ರಹ್ಮನಿಗೂ ಇದಕ್ಕೂ ಯಾವ ವಿಧವಾದ ವೈವಿಧ್ಯತೆಯೂ ಇಲ್ಲ, ಬ್ರಹ್ಮಮಯವೇ

ಒಬ್ಬ ಶಿಷ್ಯ—ಹಾಗಾ, ಗುರುಗಳೇ ಬ್ರಹ್ಮನಿಗೂ ಜಗತ್ತಿಗೂ ಯಾವ ವೈವಿಧ್ಯತೆಯೂ ಇಲ್ಲವೆ ?

ಯಾದವ—ಇಲ್ಲ, ಎಲ್ಲವೂ ಬ್ರಹ್ಮಮಯವೇ ಆಗಿರುವುದು ಯಾವರೀತಿಯ ವ್ಯತ್ಯಾಸವೂ ಇಲ್ಲ

ಮತ್ತೊಬ್ಬ—ಮತ್ತೆ ಎರಡೂ ಬೇರೆ ಬೇರೆಯಾಗಿ ಕಾಣಿಸುತ್ತಲ್ಲಾ ?

ಯಾದವ—ಬೇರೆ ಬೇರೆ ಕಾಣಿಸಿದರೂ ಮೂಲತಃ ಒಂದೇ

ಎಲ್ಲರೂ—ಈದಿನ ಬಹಳ ಒಳ್ಳೆಯ ಪಾಠವನ್ನು ಕಲಿತೆವು ಜಗತ್ತು ಬ್ರಹ್ಮಮಯವೇ ಎನ್ನುವುದನ್ನು ಅರಿತೆವು.

ಯಾದವ—ರಾಮಾನುಜ ಏಕೆ ಹಾಗೆ ಕುಳಿತಿರುವೆ ?

ರಾಮಾನುಜ—ತಾವು ಅನುಮತಿ ಇತ್ತರೆ ನನ್ನ ಅಲ್ಪಮತಿಗೆ ತಿಳಿದ ವಿಷಯವನ್ನು ಅರುಹುವೆನು.

ಯಾದವ—ಹಾಗಾದರೆ ಹೇಳು ನೋಡೋಣ

ರಾಮಾನುಜ—'ಸರ್ವಂ ಖಲ್ವಿದಂ ಬ್ರಹ್ಮಂ' ಈ ಸಮಸ್ತ ವಿಶ್ವವೂ ಬ್ರಹ್ಮಸ್ವರೂಪವಾಗಿದೆ, ಈ ಪ್ರಪಂಚವು ಬ್ರಹ್ಮನಿಂದಲೇ ಸೃಷ್ಟಿಸಲ್ಪಟ್ಟು, ಬ್ರಹ್ಮನಿಂದಲೇ ರಕ್ಷಿಸಲ್ಪಟ್ಟು, ಬ್ರಹ್ಮನಲ್ಲಿಯೇ ಲಯವಾಗುತ್ತದೆ. ಮೀನು ನೀರಿನಲ್ಲೇ ಹುಟ್ಟಿ ನೀರಲ್ಲೇ ಬೆಳೆದು ನೀರಲ್ಲೇ ಲಯವಾಗುತ್ತದೆ. ಆದರೆ ಅದು ನೀರೇ ಆಗುವುದಿಲ್ಲ ತನ್ನದೇ ಆದ ದೇಹವನ್ನು ಹೊಂದಿರುತ್ತದೆ ಇದರಂತೆಯೇ ವಿಶ್ವವು ಬ್ರಹ್ಮನಲ್ಲ.

ಯಾದವ—(ಕೋಪದಿಂದ) ಹಾಗಾದರೆ "ನೇಹನಾನಾಸ್ತಿ ಕಿಂಚನ," ಎನ್ನುವುದಕ್ಕೆ ನಿನ್ನ ವ್ಯಾಖ್ಯಾನವೇನು ?

ರಾಮಾನುಜ—ಇಲ್ಲಿ ವೈವಿಧ್ಯತೆ ಇಲ್ಲವೇ ಇಲ್ಲ ಎಂದಲ್ಲ. ಆದರೆ ವಿಶ್ವದ ಎಲ್ಲಾ ವಸ್ತುಗಳೂ ಪ್ರತ್ಯೇಕವಾಗಿಲ್ಲ. ಎಲ್ಲಾ ಇಲ್ಲಿ ಒಂದು ಸರದಲ್ಲಿ ಪೋಣಿಸಿರುವ ಮಣಿಯಂತೆ ಒಕ್ಕೂಡಿವೆ. ಎಲ್ಲಾ ಮಣಿಗಳೂ ಒಂದಾಗಿ ಸೇರಿದರೇನೇ ಮಣಿಹಾರ ಎನಿಸಿಕೊಳ್ಳುತ್ತದೆ. ಅದರಂತೆಯೇ ವಿಶ್ವದಲ್ಲಿಯೂ ಪ್ರತಿಯೊಂದು ವಸ್ತುವೂ ಒಕ್ಕೂಡಿ ಬ್ರಹ್ಮನಲ್ಲಿ ಸೇರಿ ಒಂದಾಗಿ ಏಕಸ್ವರೂಪವನ್ನು ಕೊಡುವ ಭಾವನೆಯನ್ನು ಮೂಡಿಸುತ್ತದೆ. ಇದರಿಂದ ವೈವಿಧ್ಯತೆಗೆ ಕುಂದಿಲ್ಲ. ಗುರುಗಳೇ ಅಲ್ಪಮತಿಯಿಂದ ನನಗೆ ತಿಳಿದುದನ್ನು ನಾನು ತಿಳಿಸಿದೆ ಇದರಲ್ಲಿ ತಪ್ಪಿದ್ದರೆ ಜ್ಞಾನಿಗಳು ಮನ್ನಿಸಬೇಕು. (ಎಂದು ನಮಸ್ಕರಿಸಿ ಕುಳಿತುಕೊಳ್ಳುವರು)

ಯಾದವ—(ಬಹಳ ಕೋಪದಿಂದ) ಎಲೆ ರಾಮಾನುಜ ಸಾಕು ನಿಲ್ಲಿಸು ನಿನ್ನ ನಾಟಕ ಮೊದಲಿಂದಲೂ ನನ್ನನ್ನು ಹೀಯಾಳಿಸುತ್ತ ಬಂದಿದ್ದೀಯೆ ! ನನ್ನ ವ್ಯಾಖ್ಯಾನವನ್ನು ಎಂದೂ ನೀನು ಒಪ್ಪಿಲ್ಲ ನನ್ನ ಶಿಷ್ಯರ ಮುಂದೆ ನನ್ನನ್ನು ಅವಮಾನಿಸುವುದೇ ನಿನ್ನ ಸ್ವಭಾವ.

ರಾಮಾನುಜ—ಇಲ್ಲಾ ಗುರುಗಳೆ, ತಾವು ನನ್ನ ಗುರುಗಳು ತಮ್ಮನ್ನು ಹೀಯಾಳಿಸುವುದೇ ! ಶಾಂತಂಪಾಪಂ, ಶಾಂತಂಪಾಪಂ (ಎಂದು ಕೆನ್ನೆಗೆ ಹೊಡೆದುಕೊಳ್ಳುವುರು.)

ಯಾದವ—ಸಾಕು ನಿನ್ನ ನಾಟಕ, ಇನ್ನು ಒಂದು ಕ್ಷಣ ಇಲ್ಲಿರಬೇಡ ತೊಲಗು ಇಲ್ಲಿಂದ ! ಈ ಕ್ಷಣವೇ ನಡೆ, ನಿನ್ನಂತಹ ಅಧಿಕ ಪ್ರಸಂಗಿ ಶಿಷ್ಯನು ನನಗೆ ಬೇಕಾಗಿಲ್ಲ. ನಡೀ. ಹೊರಡು ಹೊರಟುಹೋಗು.

ರಾಮಾನುಜ—ಆಗಲಿ ಗುರುಗಳೆ (ವಿನಯ, ಭಕ್ತಿಯಿಂದ ಗುರುಗಳ ಪಾದಕ್ಕೆ ಮಣಿ ಹೊರಡುವರು.

ಯಾದವ—ಸಧ್ಯ ತೊಲಗಿದ. ಇನ್ನು ನಮ್ಮ ಪಾಠಕ್ಕೆ ತೊಂದರೆ ಇಲ್ಲ. ಶಿಷ್ಯರೇ ಈದಿನ ಇಲ್ಲಿಗೇ ಪಾಠ ನಿಲ್ಲಿಸುವ ನಾಳೆ ಸಾಧಿಸುವ (ಎಂದು ಏಳುವರು ಶಿಷ್ಯರೂ ನಮಸ್ಕರಿಸಿ ಏಳುವರು' ಎಲ್ಲರೂ ಹೋಗುವರು.)

(ತೆರೆಬೀಳುವುದು)

## ದೃಶ್ಯ—೨

(ರಾಮಾನುಜರ ಮನೆ ರಾಮಾನುಜರು ಶಾಸ್ತ್ರಾರ್ಥದ ಗ್ರಂಥ ಓದುವುದರಲ್ಲಿ ನಿರತರಾಗಿರುವರು ಶ್ರೀ ಕಾಂಚೀಪೂರ್ಣರು ಬಂದು ರಾಮಾನುಜರ ಬಾಗಿಲಲ್ಲಿ

ನಿಲ್ಲುವರು. ರಾಮಾನುಜ ಓದುತ್ತಲೇ ಇರುವರು. ನೆರಳು ಬೀಳಲು ಕತ್ತೆತ್ತಿ ಕಾಂಚೀಪೂರ್ಣರನ್ನು ನೋಡುವರು.)

ರಾಮಾನುಜ—ಬನ್ನಿ ಗುರುಗಳೇ, ಒಳಗೆ ದಯಮಾಡಿಸಿ, ಈ ಆಸನವನ್ನಲಂಕರಿಸಿ.

ಕಾಂಚೀಪೂರ್ಣ—ಇಲ್ಲ, ರಾಮಾನುಜ, ನಿಮ್ಮ ವ್ಯಾಸಂಗ ನಡೆಯಲಿ.

ರಾಮಾನುಜ—ವ್ಯಾಸಂಗ ನಡೆಯುತ್ತಲೇ ಇರುವುದು ಆದರೆ ತಮ್ಮಂತಹ ಗುರುಗಳು ಲಭಿಸುವುದು ಅಲಭ್ಯ.

ಕಾಂಚೀಪೂರ್ಣ—ನಾನು ಹೇಗೆ ತಮ್ಮ ಗುರುಗಳಾಗ ಬಲ್ಲೆ ? ನಾನಾದರೋ ಜಾತಿಯಲ್ಲಿ ವೈಶ್ಯ ಏನೂ ಅರಿಯದ ಅಜ್ಞಾನಿ ತಾವಾದರೋ ವಿದ್ವನ್ಮಣಿಗಳು ಶಾಸ್ತ್ರಾಭ್ಯಾಸ ಮಾಡಿದವರು.

ರಾಮಾನುಜ—ಗುರುಗಳೇ ಹಾಗೆಲ್ಲಾ ಹೇಳಬೇಡಿ. ಇಂದು ನನಗೆ ಕುರುಡನಿಗೆ ಕಣ್ಣು ಬಂದಂತಾಯಿತು ಕಾಂಚೀಪುರ ವಾಸಿಯಾದ ಶ್ರೀ ವರದರಾಜರ ಕೃಪೆಯಿಂದ ಭಕ್ತಿ ಪರಿಪೂರ್ಣರಾದ ತಮ್ಮನ್ನು ಸ್ವಾಮಿಯೇ ನನ್ನ ಬಳಿಗೆ ಕಳುಹಿಸಿರುವನು.

ಕಾಂಚೀಪೂರ್ಣ—ಇದೇನು ಹೀಗೆ ಹೇಳುವೆ ರಾಮಾನುಜ ? ನಿನ್ನ ಗುರು ಯಾದವಪ್ರಕಾಶರು.

ರಾಮಾನುಜ—ನನ್ನ ಗುರುಗಳಾದ ಶ್ರೀ ಯಾದವಪ್ರಕಾಶರು ನನ್ನನ್ನು ಅವರ ಸೇವೆಯಿಂದ ದೂರ ಮಾಡಿದರು. ನನಗೆ ಅವರ ಸೇವೆಯನ್ನೂ ಅದರಿಂದ ಬರುವ ಪುಣ್ಯವನ್ನೂ ಸಿಗದಂತೆ ಮಾಡಿರುವರು.

ಕಾಂಚೀಪೂರ್ಣ—ಆದರೆ ನಾನು ಜ್ಞಾನಿ ಅಲ್ಲ, ಶಾಸ್ತ್ರಾಧ್ಯಯನ ಮಾಡಿಲ್ಲ. ವರದರಾಜಸ್ವಾಮಿಯ ಸೇವೆಯನ್ನು ಬಿಟ್ಟು ಮತ್ತೇನನ್ನು ಅರಿಯೆ ತಾವೇ ನನ್ನ ಗುರುಗಳು ನಾನು ತಮ್ಮ ಚರಣಸೇವಕ ತಮ್ಮ ಶಾಸ್ತ್ರಜ್ಞಾನ ನನಗೆಲ್ಲಿರುವುದು ? ತಮ್ಮ ಪಾಂಡಿತ್ಯದ ಮುಂದೆ ನಾನು ಅಜ್ಞಾನಿ.

ರಾಮಾನುಜ—(ಕೈಮುಗಿದು) ಮಹಾತ್ಮಾ ಹಾಗೆನ್ನಬೇಡಿ, ತಮ್ಮ ಭಕ್ತಿಯ ಮುಂದೆ ನಮ್ಮ ಜ್ಞಾನ ಏಕೆ ? ಭಕ್ತಿ ಇಲ್ಲದ ಶಾಸ್ತ್ರಜ್ಞಾನವು ಕತ್ತೆಯು ಹೊತ್ತ ಕಸ್ತೂರಿಯ ಹಾಗೆ, (ಗಳ ಗಳ ಎಂದು ಅಳುವರು) ತಾವು ಶಿಷ್ಯನ ಕೈಬಿಡಬೇಡಿ. ತಮ್ಮ ಶರಣಾಗತನಾಗಿದ್ದೇನೆ. ನನ್ನನ್ನು ಶಿಷ್ಯನಾಗಿ ಸ್ವೀಕರಿಸಿ (ಎಂದು ಕಣ್ಣೀರನ್ನು ಸುರಿಸುತ್ತಾ ಪಾದಗಳ ಮೇಲೆ ಬಿದ್ದು ಹೊರಳಾಡುವರು.)

ಕಾಂಚೀಪೂರ್ಣ—(ಅವರನ್ನು ಮೇಲೆತ್ತುತ್ತಾ) ಅಳಬೇಡಿ ನನ್ನ ಮಗುವೆ, ನಿಮ್ಮ ಗುರುಭಕ್ತಿ ಮತ್ತು ಭಗವದ್ಭಕ್ತಿಗೆ ಮೆಚ್ಚಿದೆ. ಎಲ್ಲಾ ಭಗವದಿಚ್ಛೆ. ನೀವು ಈ ದಿನದಿಂದ ಸಾಲ್ವಪುರದಡಿಯ ಬಾವಿಯಿಂದ ಪ್ರತಿದಿನ

ತಪ್ಪದೆ ಒಂದು ಬಿಂದಿಗೆ ನೀರನ್ನು ಶ್ರೀ ವರದರಾಜಸ್ವಾಮಿಯ ಅಭಿಷೇಕಕ್ಕೆ ತಂದುಕೊಡಿ ಇದರಿಂದ ತೃಪ್ತನಾದ ಭಗವಂತನು ತಮ್ಮ ಅಭೀಷ್ಟವನ್ನು ನೆರವೇರಿಸುತ್ತಾನೆ ಇನ್ನು ಯೋಚಿಸಬೇಡಿ

ರಾಮಾನುಜ—ಆಗಲಿ ಗುರುಗಳೇ ಇದೋ ಈಗಲೇ ಹೊರಟೆ

(ಇಬ್ಬರೂ ಒಂದೊಂದು ಕಡೆ ಹೋಗುವರು)

(ತೆರೆಬೀಳುವುದು)

## ದೃಶ್ಯ—೩

ಸ್ಥಳ—ಶ್ರೀರಂಗ

(ಶ್ರೀ ಆಳವಂದಾರ್ ಅಂದರೆ ಯಾಮುನಾಚಾರ್ಯರ ಮಠ ವಿಶಾಲವಾದ ಭವ್ಯವಾದ ಕಟ್ಟಡ ನಾಲ್ಕೈದು ದೊಡ್ಡ ದೊಡ್ಡ ಕೊಠಡಿಗಳು ಮಧ್ಯೆ ದೊಡ್ಡ ಹಜಾರ. ಮಧ್ಯೆ ನರಸಿಂಹಸ್ವಾಮಿಯ ಗರ್ಭಗುಡಿ ಇದೆ ಯಾಮುನಾಚಾರ್ಯರು ಒಂದು ವಿಶಾಲವಾದ ಕೊಠಡಿಯಲ್ಲಿ ತಿರುವರಂಗರೇ ಮೊದಲಾದ ಶಿಷ್ಯ ವೃಂದದ ಜೊತೆ ಕುಳಿತಿರುವರು ಇವರ ಮುಂದೆ ಒಂದು ಪೀಠವಿರುವುದು ಜಿಂಕೆಯ ಚರ್ಮದ ಮೇಲೆ ಆಸೀನರಾಗಿರುವರು )

ಆಳವಂದಾರ್—ಶಿಷ್ಯರೇ ಕೇಳಿ, ಶ್ರೀಮನ್‌ನಾರಾಯಣನಲ್ಲಿ ಶರಣಾಗತಿ ಅಂದರೆ ಧರ್ಮ, ಅರ್ಥ, ಕಾಮ, ಮೋಕ್ಷಗಳನ್ನು ಪಡೆಯುವ ವಿಧಾನವನ್ನು ತಿಳಿಸುತ್ತೇನೆ

ಎಲ್ಲಾ ಹೂವುಗಳಲ್ಲೂ ಇರುವ ಮಕರಂದವು ಒಂದುಕಡೆ ಸೇರಿದರೆ ನಮಗೆ ಜೇನು ಸಿಗುತ್ತದೆ ಅಂತೆಯೇ ಅನೇಕ ಸಂಸ್ಕಾರಗಳ ನಂತರ ಹಸುವಿನ ಹಾಲಿನಿಂದ ನಮಗೆ ಬೆಣ್ಣೆ, ತುಪ್ಪ ದೊರಕುತ್ತದೆ ಅದೇ ರೀತಿ ಮೂಲೋಕಗಳಿಗೂ ಶ್ರೀಮನ್ ನಾರಾಯಣನು ಆಧಾರ ಭೂತನು ಅಂತಹವನಲ್ಲಿ ಶರಣಾಗತಿಯನ್ನು ಹೊಂದಿದರೆ ಮಾತ್ರ ಧರ್ಮ, ಅರ್ಥ, ಕಾಮ ಮೋಕ್ಷಗಳನ್ನು ಪಡೆಯಲು ಸಾಧ್ಯ.

ತಿರುವರಂಗ—(ಆಳವಂದಾರರಂತೆ ವಯೋವೃದ್ಧರು ಮಹಾಜ್ಞಾನಿಗಳು ಎದ್ದು ನಿಂತು. ಭಕ್ತಿಯಿಂದ ನಮಸ್ಕರಿಸಿ) ಪೂಜ್ಯ ಗುರುಗಳೇ ತಾವು ಹೇಳಿದಂತೆ ಶ್ರೀಮನ್‌ನಾರಾಯಣನನ್ನು ಸೇವಿಸಲು ಹೇಗೆ ಸಾಧ್ಯ ?

ಆಳವಂದಾರ್—ಅದು ಹೇಗೆ ಎಂಬುದನ್ನು ಹೇಳುತ್ತೇನೆ

ನಾವು ದೇವರನ್ನು ಎದುರಿಗೆ ನೋಡಲು ಸಾಧ್ಯವಿಲ್ಲವೆಂಬುದು ನಿಜ ಆದರೆ ಭಗವಂತನನ್ನು ಭಕ್ತರ ರೂಪದಲ್ಲಿ ಕಾಣಬಹುದು. ಪರಬ್ರಹ್ಮನೆನಿಸಿರುವ ನಾರಾಯಣನಲ್ಲಿ ಅಚಲ ಭಕ್ತಿಯಿಂದಲೂ, ಪ್ರೀತಿಯಿಂದಲೂ ಒಲಿಸಿಕೊಂಡಿರುವ ಭಕ್ತ ಶ್ರೇಷ್ಠರ ವಿಗ್ರಹಗಳನ್ನು ಭಕ್ತಿಯಿಂದ ಪೂಜಿಸಿದರೆ ಶ್ರೀಮನ್ ನಾರಾಯಣನು

ಒಲಿಯುವನು ಇದಕ್ಕೆ ಸಾಕ್ಷಿಯಾಗಿ ನನ್ನ ಏಕೈಕ ಗುರುಗಳಾದ ತನ್ನ ಜೀವಮಾನವನ್ನೇ ಶ್ರೀರಂಗದ ರಂಗನಾಥನ ಸೇವೆಗೆ ಮುಡಿಪಾಗಿಟ್ಟು ಶ್ರೀ ತಿರುಪ್ಪಾಣಿ ಆಳ್ವಾರರು ಮತ್ತು ಈಗ ಕಾಂಚಿಯಲ್ಲಿ ನೆಲೆಸಿರುವ ಶ್ರೀ ವರದರಾಜನ ಸೇವೆಯಲ್ಲಿ ತಮ್ಮನ್ನೇ ಮೈಮರೆತು ಹಗಲೂ ರಾತ್ರಿಯೂ ಸೇವೆ ಸಲ್ಲಿಸುತ್ತಿರುವ ಶ್ರೀ ಕಾಂಚೀಪೂರ್ಣರೂ ಸಾಕ್ಷಿಯಾಗಿದ್ದಾರೆ.

ತಿರುವರಂಗರ್—ಆ ಪೂಜ್ಯ ಗುರುಗಳ ಮಾರ್ಗವನ್ನನುಸರಿಸಿದರೆ ಮಾತ್ರ ಸಾಕೆ ?

ಆಳವಂದಾರ್—ಅವರ ಮಾರ್ಗ ಅನುಸರಿಸಿದರೆ ಮಾತ್ರವಲ್ಲ, ಅವರಂತೆಯೇ ನಿಸ್ವಾರ್ಥಿಯಾಗಬೇಕು ಆದ್ದರಿಂದಲೇ ಮಹಾಪುರುಷರೆಲ್ಲಾ ಪಾಂಡಿತ್ಯವನ್ನು ಕೈಬಿಟ್ಟು ಸುಲಭವಾದ ಭಕ್ತಿಪಂಥವನ್ನು ಒಡಿದಿರುವುದು ಆದ್ದರಿಂದ ನೀವುಗಳು ಅಂತಹ ಭಕ್ತರನ್ನು ಮರೆಹೊಕ್ಕು, ಭಕ್ತಪರಾಧೀನನಾದ ಭಗವಂತನನ್ನು ಒಲಿಸಿಕೊಳ್ಳಿ

ತಿರುವರಂಗ—(ಅತಿಯಾದ ದುಃಖದಿಂದ) ಗುರುಗಳೇ ತಮ್ಮ ಮಾತುಗಳನ್ನು ಕೇಳಿದರೆ ತಾವು ಪರಂಧಾಮಕ್ಕೆ ತೆರಳುವ ಸನ್ನಾಹ ಮಾಡುವಂತಿದೆ ನಮ್ಮನ್ನು ಅನಾಥರಾಗಿ ಮಾಡಿ ಹೋಗುವಿರಾ ?

ಆಳವಂದಾರ್—ನಮ್ಮದೇನಿದೆ ಎಲ್ಲಾ ದೈವೇಚ್ಛೆ ! ಅವನಿಗೆ ಆತ್ಮಾರ್ಪಣೆಮಾಡಿ, ಜಗತ್ತಿನ ವಿಚಾರದಿಂದ ಮುಕ್ತನಾಗಿರಬೇಕು ಆದರೆ ಅಹಂ' ಇಂದ ದೂರವಿರಬೇಕು ನಾನು ಭಗವಂತನ ಪಾದ ಸೇವಕ, ಇದೇ ನನ್ನ ಗುರಿ ಅವನ ಕರೆ ಬಂದಾಗ ಹೋಗಲೇಬೇಕು. ಈ ಜಗತ್ತಿನ ವ್ಯಾಮೋಹ ಬಿಡಬೇಕು. ಆದ್ದರಿಂದ ನೀವುಗಳು 'ಅಹಂ,' ಬಿಟ್ಟು ಭಗವಂತನ ಸೇವೆಯಲ್ಲಿ ತೊಡಗಿರಿ.

ತಿರುವರಂಗ—ಇದಕ್ಕೆ ಒಂದು ಸುಲಭೋಪಾಯವನ್ನು ತಿಳಿಸಿ.

ಆಳವಂದಾರ್—ನೀವೆಲ್ಲಾ ತಿರುಪತಿಯ ವೆಂಕಟೇಶ್ವರನನ್ನು, ಕಾಂಚೀಪುರದ ಶ್ರೀ ವರದರಾಜಸ್ವಾಮಿಯನ್ನು ಅಡಿಗಡಿಗೆ ದರ್ಶನಮಾಡುತ್ತಿರಿ ಶ್ರೀರಂಗ ಕ್ಷೇತ್ರವು ವೈಕುಂಠವೆನಿಸಿದರೆ ತಿರುಪತಿಯು ಶ್ರೀಮನ್ನಾರಾಯಣನ ಪಾದಗಳನ್ನು ಸೇರುವ ರಾಜಮಾರ್ಗ ಕಾಂಚೀಪುರವು ಕೇವಲ ಭಕ್ತಿಗೇ ಒಲಿಯುವ ಸ್ಥಳ.

(ಎಂದು ಹೇಳಿ ಗ್ರಂಥಾವಲೋಕನ ಮಾಡುತ್ತಾ ಕುಳಿತುಕೊಳ್ಳುವರು ಒಬ್ಬ ಶಿಷ್ಯ ಪ್ರವೇಶಿಸಿ)

ಶಿಷ್ಯ—(ವಂದಿಸಿ) ಗುರುಗಳೇ ಕಾಂಚೀಪುರದ ಇಬ್ಬರು ಬ್ರಾಹ್ಮಣರು ತಮ್ಮ ದರ್ಶನಕ್ಕಾಗಿ ಬಂದಿರುವರು.

ಆಳವಂದಾರ್—ಅವರನ್ನು ಈಗಲೇ ಮರ್ಯಾದೆಯೊಡನೆ ಕರೆದುಕೊಂಡು ಬನ್ನಿ (ಅವನು ಹೋಗಿ ಇಬ್ಬರನ್ನು ಕರೆದುಕೊಂಡು ಬರುವನು )

ಆಳವಂದಾರ್—ಬನ್ನಿ ಬ್ರಾಹ್ಮಣೋತ್ತಮರೇ ಬನ್ನಿ ಈ ಪೀಠವನ್ನಲಂಕರಿಸಿ (ಪೀಠವನ್ನು ತೋರುವರು)

ಬ್ರಾಹ್ಮಣರು—(ವಂದಿಸಿ ಕುಳಿತುಕೊಂಡು) ತಾವು ಬಹಳ ಅಸ್ವಸ್ಥರಾಗಿರುವಿರೆಂದು ಕೇಳಿ ತಮ್ಮ ದರ್ಶನಕ್ಕಾಗಿ ಬಂದೆವು.

ಆಳವಂದಾರ್—ಕಾಂಚೀಪುರ ವಾಸಿಗಳು ಕ್ಷೇಮವೆ ? ಭಕ್ತ ಶಿರೋಮಣಿಗಳಾದ ಕಾಂಚೀಪೂರ್ಣರು ಕ್ಷೇಮದಿಂದಿರುವರೆ ?

ಒಬ್ಬ ಬ್ರಾಹ್ಮಣ—ತಮ್ಮ ಕೃಪೆಯಿಂದ ಎಲ್ಲರೂ ಕುಶಲದಿಂದಿರುವರು

ಆಳವಂದಾರ್—ನಾನು ಕಾಂಚೀಪುರಕ್ಕೆ ಬಂದಿದ್ದಾಗ ನನ್ನ ಮನವನ್ನು ಆಕರ್ಷಿಸಿದ ಶ್ರೀ ರಾಮಾನುಜರು ಎಲ್ಲಿರುವರು ?

ಒಬ್ಬ ಬ್ರಾಹ್ಮಣ—ಅವರು ಈಗ ಕಂಚಿಯಲ್ಲೇ ಇರುವರು

ಆಳವಂದಾರ್—ಯಾದವಪ್ರಕಾಶರ ಬಳಿಯೇ ಅಧ್ಯಯನ ಮಾಡುತ್ತಿರುವರೆ ?

ಇನ್ನೊಬ್ಬ ಬ್ರಾಹ್ಮಣ—ಇಲ್ಲ, ಈಗ ಅವರು ಮನೆಯಲ್ಲೇ ಅಧ್ಯಯನ ಮಾಡುತ್ತಿರುವರು

ಒಬ್ಬ ಬ್ರಾಹ್ಮಣ—ತಾವು ರಚಿಸಿರುವ ಶಾಸ್ತ್ರಗ್ರಂಥಗಳಿಗೆ ಸ್ವಯಂ ವಿಮರ್ಶೆಮಾಡುತ್ತಿರುವರು

ಆಳವಂದಾರ್—ಅವರೇ ವಿಮರ್ಶೆಮಾಡುತ್ತಿರುವರೆ ? ಏಕೆ ಯಾದವರನ್ನು ಬಿಟ್ಟರು ?

ಬ್ರಾಹ್ಮಣ—ಯಾದವರೇ ಇವರನ್ನು ಶಿಷ್ಯ ವೃತ್ತಿಯಿಂದ ದೂರೀಕರಿಸಿದರು.

ಆಳವಂದಾರ್—ಈಗ ಅವರ ಗುರುಗಳಾರು ?

ಬ್ರಾಹ್ಮಣ—ಭಕ್ತಾಗ್ರಣಿ ಕಾಂಚೀಪೂರ್ಣರು ಅವರ ಗುರುಗಳು ಅವರ ಅಣತಿಯ ಪ್ರಕಾರ ವರದರಾಜಸ್ವಾಮಿಗೆ ತೀರ್ಥಸೇವೆ ಸಲ್ಲಿಸುತ್ತಾ ತಮ್ಮ ವ್ಯಾಸಂಗದಲ್ಲೂ ನಿರತರಾಗಿರುವರು

ಆಳವಂದಾರ್—ಭಗವಂತಾ ನಿನ್ನ ಭಕ್ತನನ್ನೂ ಸರಿಯಾದೆಡೆ ಸೇರಿಸಿದೆಯಾ (ಎಂದು ಕೈಮುಗಿದು ಆನಂದಭಾಷ್ಪವನ್ನು ಸುರಿಸುವರು ) ಒಂದು ನಿಮಿಷ ಕಣ್ಣುಮುಚ್ಚಿ ಕೂತು ನಂತರ ಭಕ್ತಿಯಿಂದ ಎರಡು ಶ್ಲೋಕ ಹೇಳುವರು)

1) ಇನ್ರಾಹ ನಾಳೈಯಾಹ, ಇನಿಚಿರಿದುಂ
ನಿನ್ರಾಹ ನಿನ್ನರುಳೇನ್ಪಾಲದೇ ನನ್ರಾಹ
ನಾನುನ್ನೈಯಿನ್ರಿಯಿಲೇನ್ಕಂಡಾಯ್ ನಾರಾಯಣನೇ
ನೀ ಯೆನ್ನೈಯನ್ರಿ ಯಿಲ್ಲೈ ॥ ೧ ॥ (ಭಕ್ತಿಸಾರಾರ)

---

1. ಇನ್ರಾಹ—ಹೇ ಪರಮಾತ್ಮನಾದ ಶ್ರೀಮನ್‌ನಾರಾಯಣನೇ ಇಂದಾಗಲೀ ನಾಳೆಯಾಗಲೀ ಮುಂದೆ ಬರತಕ್ಕ ದಿನಗಳೆಲ್ಲಾಗಲೀ ನಿನ್ನ ಕೃಪೆ ನನ್ನಮೇಲೆ

2) ತಿರುಕಂಡೇನ್ ಪೊನ್ಮೇನಿಕಂಡೇನ್ ತಿರಲಂ
ಅರುಕ್ಕನಣಿ ನಿರಮುಂ ಕಂಡೇನ್ ಶೆರುಕಳರುಂ
ಪೊನ್ನಾಲಿ ಕಂಡೇನ್, ಪುರಿಶಂಗಂಕ್ಕಂಡೇನ್
ಎನ್ನಾಲಿ ವಣ್ಣನ್‌ಪ್ಪಾಲ್ ॥೧॥ (ಪೇಯಾಳ್ವಾರ್)

3) ಆಪಾದ ಚೂಡ ಮನುಭೂಯ ಹರಿಂ ಶಯಾನಾಂ ।
ಮಧ್ಯೇ ಕವೇರದುಹಿತುರ್ಮುದಿ ತಾನ್ತರಾತ್ಮಾ ॥
ಅದ್ರಷ್ಟತಾಂನಯನಯೋರ್ವಿಷಯಾನ್ತರಾಣಾಃ ।
ಯೋನಿಶ್ಚಕಾಯಮನವ್ಯೈ ಮುನಿವಾಹನಂತಂ ॥ (ಪೆರಿಯನಂಬಿ)

(ಕಣ್ತೆರೆದು) ಮಗು ಮಹಾಪೂರ್ಣ ನೀನು ಈಗಲೇ ಹೋಗಿ ಶ್ರೀ ರಾಮಾನುಜರನ್ನು ಕರೆತರುವವನಾಗು ಅವರು ನಮ್ಮ ಬಳಿ ಇರುವುದೇ ಉತ್ತಮವು.

ಮಹಾಪೂರ್ಣ—ವಂದಿಸಿ, ಆಗಲೀ ಗುರುಗಳೇ ಇದೋ ಈಗಲೇ ಹೊರಟೆ (ಎಲ್ಲರೂ ಗುರುಗಳಿಗೆ ವಂದಿಸಿ ಹೊರಡುವರು )

(ತೆರೆ ಬೀಳುವುದು)

## ದೃಶ್ಯ—೪

(ಕಾಂಚಿಪುರದ ದೇವಸ್ಥಾನದ ದಾರಿ. ಮಹಾಪೂರ್ಣರು ಬಹಳ ವೇಗವಾಗಿ ದೇವಸ್ಥಾನದ ಕಡೆ ಧಾವಿಸುವರು.)

---

1. ಇದ್ದೇ ಇರುತ್ತದೆ. ನೀನು ನನ್ನನ್ನು ಬಿಟ್ಟಿರುವುದಿಲ್ಲ. ನಾನು ನಿನ್ನನ್ನು ಬಿಟ್ಟಿರುವುದಿಲ್ಲ ನರಶಬ್ದವಿಲ್ಲದೆ ನಾರಾಯಣನಿಲ್ಲ. ನಾರಾಯಣನಿಲ್ಲದೆ ನರ(ಜೀವಿ)ವಿಲ್ಲ.

2. ಮೊದಲದಾಗಿ ಮಹಾಲಕ್ಷ್ಮಿಯನ್ನು ನೋಡಿದೆನು ಸುವರ್ಣವಾಗಿಹ ಪರಮಾತ್ಮನ ದಿವ್ಯ ವಿಗ್ರಹವನ್ನು ಕಂಡೆನು ಸೂರ್ಯನಂತೆ ಪ್ರಕಾಶಿಸುವ ಕಾಂತಿಯನ್ನು ಹೊಂದಿ, ಯುದ್ಧಕ್ಕೆ ಸಿದ್ಧನಾಗಿರುವ ಸುದರ್ಶನ ಚಕ್ರವನ್ನು ಮತ್ತು ಬೆಳ್ಳಿಯಂತೆ ಹೊಳೆಯುವ ಬಲಮುಡಿ ಶಂಖವನ್ನು ಸಮುದ್ರದಂತೆ ಗಂಭೀರ ಸ್ವಭಾವವುಳ್ಳ ನನ್ನ ಸ್ವಾಮಿ ಶ್ರೀಮನ್ನಾರಾಯಣನನ್ನು ಹತ್ತಿರದಲ್ಲಿಯೇ ನೋಡಿದೆನು.

3. ಕಾವೇರಿ ಮಧ್ಯದಲ್ಲಿ ಮಲಗಿರುವ ರಂಗನಾಥಸ್ವಾಮಿಯನ್ನು ಆಪಾದ ಮಸ್ತಕದರ್ಶನಮಾಡಿ, ಅನುಭವಿಸಿ ಸಂತುಷ್ಟರಾಗಿ ಬೇರೆ ಇನ್ನೊಂದು ವಸ್ತುವನ್ನು ಕಣ್ತೆರೆದು ನೋಡಲಾರೆನೆಂದು ನಿಶ್ಚಯಿಸಿ ಮುನಿವಾಹನರೆಂಬ ತಿರುಪ್ಪಾಣಾಳ್ವಾರರನ್ನು ಧ್ಯಾನಿಸುತ್ತೇನೆ

ಮಹಾಪೂರ್ಣ—(ತನಗೆತಾನೆ) ಕಾಂಚಿಪುರವನ್ನೇನೋ ತಲಪಿದ್ದಾಯಿತು. ಇನ್ನು ರಾಮಾನುಜರನ್ನು ಎಲ್ಲಿ ಹುಡುಕುವುದು? ಮೊದಲು ಶ್ರೀ ವರದರಾಜರ ದರ್ಶನವನ್ನು ಮಾಡುತ್ತೇನೆ ಅಲ್ಲಿ ಯಾರನ್ನಾದರೂ ವಿಚಾರಿಸಿದರೆ ತಿಳಿಯಬಹುದು. (ಒಳಗೆ ಹೋಗಿ ಭಗವಂತನ ದರ್ಶನ ಮಾಡುವರು) ಅಲ್ಲೇ ಕಾಂಚೀಪೂರ್ಣರು ಭಗವಂತನ ಮುಂದೆ ನಿಂತು ಶ್ಲೋಕವನ್ನು ಹೇಳುತ್ತಿರುವರು.

ನಮಾಮಿ ವರದರಾಜ ಪಾದಪಂಕಜಂ ।
ಕರೋಮಿ ವರದರಾಜ ಪೂಜನಂ ಸದಾ ॥
ವದಾಮಿ ವರದರಾಜ ನಾಮ ನಿರ್ಮಲಂ ।
ಸ್ಮರಾಮಿ ವರದರಾಜ ತತ್ವಮವ್ಯಯಂ ॥

(ಅವರ ಧ್ಯಾನ ಮುಗಿಯುವವರೆಗೂ ಮಹಾಪೂರ್ಣರು ನಿಂತಿರುವರು ಕಾಂಚೀಪೂರ್ಣರು ಕಣ್ಣು ಬಿಡುವರು)

ಕಾಂಚೀಪೂರ್ಣ—ತಾವು ಯಾರು? ಎಲ್ಲಿಂದ ಆಗಮಿಸಿರುವಿರಿ?

ಮಹಾಪೂರ್ಣ—ಈ ಅಕಿಂಚನನನ್ನು ಮಹಾಪೂರ್ಣನೆನ್ನುವರು ಶ್ರೀ ಶ್ರೀ ಆಳವಂದಾರರ ಶಿಷ್ಯ, ತಾವೇ ಭಕ್ತ ಶಿರೋಮಣಿಯಾದ ಕಾಂಚೀಪೂರ್ಣರಲ್ಲವೆ?

ಕಾಂಚೀಪೂರ್ಣ—ಅಹುದು, ನನ್ನನ್ನು ಕಾಂಚೀಪೂರ್ಣರೆಂದು ಕರೆಯುವರು ಶ್ರೀ ಶ್ರೀ ಯಾಮುನಾಚಾರ್ಯರು ಅಸ್ವಸ್ಥರಾಗಿರುವರೆಂದು ಕೇಳಿದೆ ಈಗ ಹೇಗಿರುವರು?

ಮಹಾಪೂರ್ಣ—(ದೀರ್ಘದಂಡ ನಮಸ್ಕಾರಮಾಡಿ) ನಾನು ಬರುವಾಗ ಸ್ವಲ್ಪ ಚೇತರಿಸಿಕೊಂಡಿದ್ದರು ಆದರೂ ಏನೂ ಹೇಳುವ ಹಾಗಿಲ್ಲ

ಕಾಂಚೀಪೂರ್ಣ—ತಾವು ತಮ್ಮ ಗುರುಗಳನ್ನು ಈ ಸ್ಥಿತಿಯಲ್ಲಿ ಬಿಟ್ಟು ಇಲ್ಲಿಗೆ ಬಂದ ಕಾರಣ?

ಮಹಾಪೂರ್ಣ—ನಮ್ಮ ಗುರುಗಳ ಆಜ್ಞೆಯಿಂದ ನಾನು ಇಲ್ಲಿಗೆ ಬರಬೇಕಾಯಿತು ಶ್ರೀರಾಮಾನುಜರನ್ನು ಬೇಗ ಅವರ ಬಳಿ ಕರೆತರಲು ಆಜ್ಞಾಪಿಸಿರುವರು. ಅದಕ್ಕೆ ತಾವು ನನಗೆ ಸಹಾಯಮಾಡಬೇಕು

ಕಾಂಚೀಪೂರ್ಣ—ಹಾಗಾದರೆ ಈದಿನ ನಮ್ಮ ಆತಿಥ್ಯ ಸ್ವೀಕರಿಸಿ, ರಾತ್ರಿ ವಿಶ್ರಮಿಸಿಕೊಳ್ಳಿ ನಾಳೆ ತಮಗೆ ಆ ಮಹಾನುಭಾವರ ದರ್ಶನ ಮಾಡಿಸುವೆನು ಬನ್ನಿ ನಮ್ಮ ಕುಟೀರಕ್ಕೆ ಹೋಗೋಣ (ಇಬ್ಬರೂ ತೆರಳುವರು)

(ತೆರೆಬೀಳುವುದು)

(ಮರುದಿನ ಇಬ್ಬರೂ ಸಾಲವೃಕ್ಷಗಳ ಬಾವಿಯ ಬಳಿ ಬರುವರು. ಅನೇಕ ವೃಕ್ಷಗಳಿಂದ ಕೂಡಿರುವುದು ಬಾವಿ. ಬಾವಿಯ ಬಳಿ ರಾಮಾನುಜರು ನೀರು ಸೇದುತ್ತಾ ಇರುವರು. ಸ್ವಲ್ಪಹೊತ್ತು ಇಬ್ಬರೂ ನೋಡುತ್ತಿರುವರು, ರಾಮಾನುಜರು ತಮ್ಮ ತೋಳಿನಮೇಲೆ ತೀರ್ಥದ ಬಿಂದಿಗೆ ಹೊತ್ತು ಬರುವರು.)

ಕಾಂಚೀಪೂರ್ಣ—ಅಲ್ಲಿ ನೋಡಿ, ಅವರೇ ರಾಮಾನುಜರು. ಶ್ರೀ ವರದರಾಜನಿಗೆ ತಮ್ಮ ತೀರ್ಥಸೇವೆಯನ್ನು ಮಾಡುತ್ತಿರುವರು. ನೀವು ಅವರನ್ನು ಕಂಡು ನಿಮ್ಮ ಉದ್ದೇಶ ತಿಳಿಸಿ. ನಿಮ್ಮ ಉದ್ದೇಶ ಕೈಗೂಡಲಿ. ನಾನು ಈಗ ದೇವಸ್ಥಾನಕ್ಕೆ ಅವಸರವಾಗಿ ಹೋಗಬೇಕು. ನನಗೆ ಅನುಜ್ಞೆ ಕೊಡಿ.

ಮಹಾಪೂರ್ಣ—ಆಗಲಿ. ತಾವು ಸ್ವಾಮಿ ಸೇವೆಯನ್ನು ಮಾಡಿ ನಾನು ಇವರಿಗೆ ಯಾಮುನಾಚಾರ್ಯರ ಆಜ್ಞೆಯನ್ನು ಅರುಹುವೆನು. (ಕಾಂಚೀಪೂರ್ಣರು ತೆರಳುವರು).

ಮಹಾಪೂರ್ಣ—(ರಾಮಾನುಜರನ್ನು ಎವೆ ಇಕ್ಕದೆ ಒಂದೇಸಮನೆ ಸ್ವಲ್ಪ ಹೊತ್ತು ನೋಡುವರು. ಅವರಲ್ಲಿ ದೇವತಾ ಭಾವನೆ ಮೂಡಿ ಪುಳಕಿತರಾಗಿ ಅವರ ಸ್ತೋತ್ರ ಮಾಡುವರು.)

ತಾವು ಸಕಲವನ್ನೂ ಜಯಿಸಿದವರು, ದಾನಶೀಲರು ।
ಶೀಲಶುದ್ಧರು ಮೃದು ಸ್ವಭಾವದವರು, ಕೃಪಾಶೀಲರು ॥
ಭಗವಂತನ ಅಪಾರ ಕೃಪೆಗೆ ಪಾತ್ರರಾದವರು ।
ಸಕಲಕಲ್ಯಾಣಗುಣಗಳಿಂದ ಪರಿಪೂರ್ಣರಾಗಿರುವವರು ॥

ಎಂದು ಹೊಗಳಿ ಯಾಮುನಾಚಾರ್ಯರು ರಚಿಸಿದ ಎರಡು ಶ್ಲೋಕಗಳನ್ನು ಹೇಳುವರು

ಮಾತಾಪಿತಾಯುವತಯಸ್ತನಯಾ ವಿಭೂತಿಃ ।
ಸರ್ವಂಯದೇವ ನಿಯಮೇನ ಮದನ್ವಯಾನಾಂ ।
ಆದ್ಯಸ್ಯನ ಕುಲಪತೇಃ ವಕುಳಾಭಿರಾಮಂ ॥
ಶ್ರೀಮತ್ ತದಂಘ್ರಿಯುಗಳಂ ಪ್ರಣಮಾಮಿಮೂರ್ಧ್ನಾ ॥ 1

1. ವಾತ್ಸಲ್ಯದಲ್ಲಿ ಸಹಜ ಪ್ರೀತಿಯುಕ್ತರಾದ ಮಾತಾಪಿತೃಗಳಂತೆ ಅವರ ಪಾದಕಮಲಗಳನ್ನು (ಶರಣಾಗತರಾಗಿ) ನಂಬಿದವರಿಗೆ ಮೋಕ್ಷ ಸಾಮ್ರಾಜ್ಯವನ್ನು ಕೊಡುವಂತ ಪರಾಂಕುಶ (ನಮ್ಮಾಳ್ವಾರ್)ರ ಪಾದಕಮಲಗಳಿಗೆ ಸಿರಬಾಗಿ ನಮಸ್ಕರಿಸುತ್ತೇನೆ.

ನಮೋ ನಮೋ ವಾಙ್ಮನಸಾತಿ ಭೂಮಯೇ
ನಮೋ ನಮೋ ವಾಙ್ಮನಸೈಕ ಭೂಮಯೇ
ನಮೋ ನಮೋಽನನ್ತ ಮಹಾ ವಿಭೂತಯೇ
ನಮೋ ನಮೋಽನಂತ ದಯೈಕಸಿನ್ಧವೇ 1

(ರಾಮಾನುಜರು ಕೇಳುತ್ತಾ ಕೇಳುತ್ತಾ ಅವರ ಹತ್ತಿರ ಬರುವರು ಹಾಗೇ ಕೇಳುತ್ತಾ ಕಲ್ಲುಬೊಂಬೆಯಂತೆ ನಿಲ್ಲುವರು

ರಾಮಾನುಜ—(ಆನಂದ ಪುಳಕಿತರಾಗಿ) ಇಂತಹ ಅಮೂಲ್ಯವಾದ ಶ್ಲೋಕಗಳನ್ನು ರಚಿಸಿದ ಪುಣ್ಯಾತ್ಮರಾರು ? ದಯವಿಟ್ಟು ಆ ಪುಣ್ಯಪುರುಷನ ದರ್ಶನ ಮಾಡಿಸುವಿರಾ ?

ಮಹಾಪೂರ್ಣ—ನನ್ನ ಗುರುಗಳಾದ ಶ್ರೀಮದ್ ಆಳವಂದಾರವರು ಶ್ರೀ ಯಾಮುನಾಚಾರ್ಯರು

ರಾಮಾನುಜ—ಪೂಜ್ಯರೇ ಮಹಾತ್ಮರಾದ ಶ್ರೀ ಆಳವಂದಾರವರು ಸ್ವಲ್ಪ ದಿನಗಳಿಂದ ಅಸ್ವಸ್ಥತೆಯಿಂದ ಮಲಗಿರುವರೆಂದು ಸಮಾಚಾರ ಕೇಳಿದೆ ಈಗ ಅವರು ಕ್ಷೇಮವ ? ಅವರ ಆಶೀರ್ವಾದ ಪಡೆದು ಬಹಳ ಕಾಲ ವಾಯಿತು ಪುನಃ ಅವರ ಆಶೀರ್ವಾದ ಪಡೆಯಬೇಕೆಂದು ಆಶಿಸುವೆ. ತಾವು ಯಾವ ನಿಮಿತ್ತದಿಂದ ಇಲ್ಲಿಗೆ ದಯಮಾಡಿಸಿರುವಿರಿ ?

ಮಹಾಪೂರ್ಣ—ಶ್ರೀ ಯಾಮುನಾಚಾರ್ಯರು ಯಾರನ್ನು ಸದಾಕಾಲವೂ ಸ್ಮರಿಸುತ್ತಿದ್ದಾರೋ ಆ ಪುಣ್ಯಾತ್ಮರೂ, ಭಕ್ತರೂ ಆದ ತಮ್ಮನ್ನು ಕಾಣಲಿಕ್ಕೆ ಬಂದೆ

ರಾಮಾನುಜ—ನನ್ನಂತಹ ಕನಿಷ್ಠನನ್ನು ಜ್ಞಾಪಿಸುವ ನಾನೇ ಧನ್ಯನು ಗುರುಗಳ ಆಜ್ಞೆ ಏನು ?

ಮಹಾಪೂರ್ಣ—ತಮ್ಮನ್ನು ಈಗಲೇ ಕರೆತರಬೇಕೆಂದು ಗುರುಗಳ ಆಜ್ಞೆಯಾಗಿರುವುದು

ರಾಮಾನುಜ—ಪೂಜ್ಯರೆ, ಸ್ವಲ್ಪಕಾದಿರಿ ಈ ಬಿಂದಿಗೆಯಲ್ಲಿರುವ ಪವಿತ್ರವಾದ ತೀರ್ಥವನ್ನು ಭಗವಂತನ ಅಭಿಷೇಕಕ್ಕೆ ಕೊಟ್ಟು ಬರುತ್ತೇನೆ. ಭಗವಂತನ ಅಭಿಷೇಕಕ್ಕೆ ವೇಳೆಯಾಗುತ್ತಿರುವುದು

---

1 ಎಂತೆಂತಹ ಜ್ಞಾನಿಗಳು ಸ್ವಯತ್ನದಿಂದ ತಿಳಿಸತಕ್ಕ ವಾಗ್ಮನಸುಗಳಿಗೆ ಆಧಾರ ಭೂಮಿಯಾಗಿರುವ ನಿನಗೆ ನಮಸ್ಕಾರವು. ಅಹಂಕಾರ ಮಮಕಾರ ನಿವೃತ್ತ ಸ್ವರೂಪವನ್ನರುಹುವ ನಿನಗೆ ನಮಸ್ಕಾರವು. ಅಪರಿಛೇದ್ಯವಾದ ಮಹಾವಿಭೂತಿಯಾಗಿರುವ ನಿನಗೆ ನಮಸ್ಕಾರವು ದಯಾಸಿಂಧುವಾಗಿರುವ ನಿನಗೆ ನಮಸ್ಕಾರ

**ಮಹಾಪೂರ್ಣ**—ಆಗಲಿ ಬೇಗ ಬನ್ನಿ.

(ರಾಮಾನುಜರು ಬಿಂದಿಗೆಯನ್ನು ಹೊತ್ತು ನಿರ್ಗಮಿಸುವರು)

**ಮಹಾಪೂರ್ಣ**—ಅವರು ಬರುವವರೆಗೂ ನನ್ನ ಗುರುಗಳು ರಚಿಸಿರುವ ಎರಡು ಶ್ಲೋಕಗಳನ್ನು ಹೇಳಿ ಗುರುಗಳ ಧ್ಯಾನಮಾಡುವೆನು

ನ ಧರ್ಮನಿಷ್ಠೋಽಸ್ಮಿನಚಾತ್ಮವೇದಿ ।
ನ ಭಕ್ತಿಮಾಂಸ್ತ್ವಚ್ಚರಣಾರವಿನ್ದೇ ॥
ಅಕಿಂಚನೋಽನನ್ಯ ಗತಿ ಶರಣ್ಯ ।
ತತ್ಪಾದಮೂಲಂ ಶರಣಂಪ್ರಪದ್ಯೇ ॥ 1

ತದಂಘ್ರಿ ಮುದ್ದಿಶ್ಯ ಕದಾಪಿಕೇನಚಿತ್ ।
ಯಥಾ ಯದಾಪ್ಯಾಪಿ ಸಕೃತ್ಕೃತೋಽಞ್ಜಲಿಃ ॥
ತದೈವಮುಷ್ಣಾತ್ಯ ಶುಭಾನ್ಯ ಶೇಷತಃ ।
ಶುಭಾನಿ ಉಷ್ಣಾತಿ ಗಜಾತು ಹೀಯತೆ ॥ 2

(ಇದು ಮುಗಿಯುತ್ತಿದ್ದಂತೆಯೇ ರಾಮಾನುಜರು ಓಡೋಡಿ ಬರುವರು)

**ರಾಮಾನುಜ**—ಪೂಜ್ಯರೇ ಹೊರಡಿ. ಆ ಮಹಾತ್ಮರ ದರ್ಶನಮಾಡಲು ನಾನು ಕಾತರನಾಗಿದ್ದೇನೆ. ಬೇಗ ಶ್ರೀರಂಗಕ್ಕೆ ಮಾರ್ಗ ತೋರಿಸಿ ಮೊದಲು ಭಗವದ್ಭಕ್ತರ ದರ್ಶನಮಾಡೋಣ

(ಇಬ್ಬರೂ ತೆರಳುವರು)

(ತೆರೆಬೀಳುವುದು)

---

1. ಧರ್ಮಾಚರಣೆ ಮತ್ತು ಧರ್ಮವನ್ನರಿಯದವನಾಗಿದ್ದೇನೆ ಆತ್ಮಸ್ವರೂಪವನ್ನು ಅರಿಯದವನಾದ್ದೇನೆ. ನಿನ್ನ ಚರಣಾರವಿಂದದ ಭಕ್ತಿಯನ್ನೂ ಅರಿಯೆ ಅನನ್ಯಗತಿ ಶರಣ್ಯನೂ ಅಕಿಂಚನನೂ ಆಗಿದ್ದೇನೆ ನನಗಿರುವ ಒಂದೇ ಜ್ಞಾನದ ಬಲದಿಂದ ನಿನ್ನ ಚರಣಾರವಿಂದವನ್ನು ಮರೆ ಹೊಗುತ್ತೇನೆ.

2. ನಿನ್ನ ಪಾದ ಕಮಲಗಳನ್ನು ಆಶ್ರಯಿಸಲು ಯಾವ ಅನುಕೂಲವೂ ಎನಗಿರುವುದಿಲ್ಲ ಹೇಗಾದರಾಗಲಿ ನಿನಗೆ ಕಿಂಚಿತ್ ನಮಸ್ಕಾರಗಳು ಶೇಷಿಯಾದ ನಿನ್ನ ಪದಕಮಲಗಳನ್ನು (ಸರ್ವಸುಲಭವಾದ) ಪರಮಪ್ರಾಪ್ಯವೆಂದು ನಂಬಿ ನಿನಗೆ ಕಿಂಚಿತ್ ನಮಸ್ಕಾರಗಳು ಆದರಿಂದ ನೀನು ನನ್ನ ಅಶೇಷಪಾಪಗಳನ್ನು ನೀಗಿಸಿ ನಿನ್ನ ಚರಣಾರವಿಂದಗಳಲ್ಲಿ ಸೇರಿಸಿಕೊಂಡು ಕಾಪಾಡಬೇಕು.

## ದೃಶ್ಯ—೫

[ಶ್ರೀರಂಗ ದೇವಸ್ಥಾನದ ಬೀದಿ ಎರಡೂ ಕಡೆಯಲ್ಲೂ ಭಾಗವತೋತ್ತಮರ ಮನೆಗಳಿರುವುದು ವಿಶಾಲವಾದ ಬೀದಿ ಎದುರಿಗೆ ಬೃಹದಾಕಾರದ ಉನ್ನತ ಗೋಪುರದಿಂದ ಕೂಡಿದ ಶ್ರೀರಂಗನಾಥನ ದೇವಾಲಯವು ಕಾಣುವುದು ಅಲ್ಲಲ್ಲೇ ಭಗವದ್ಭಕ್ತರ ಮಠಗಳು ಇರುವುವು ಯಾಮುನಾಚಾರ್ಯರ ಮಠವು ದೇವಾಲಯದ ಪಕ್ಕದಲ್ಲೇ ಇರುವುದು ಅಲ್ಲಿ ಭಾಗವತೋತ್ತಮರ ಮತ್ತು ಜನಗಳ ಗುಂಪು ತುಂಬಿರುವುದು ]

ರಾಮಾನುಜ—ಪೂಜ್ಯರೇ ಇದೇನು ? ಇಲ್ಲಿ ಇಷ್ಟು ದೊಡ್ಡ ಗುಂಪು !

ಮಹಾಪೂರ್ಣ—ಇದೇ ನಮ್ಮ ಗುರುಗಳ ಮಠ ಈ ಗುಂಪು ನೋಡಿದರೆ ನನಗೇನೋ ಸಂದೇಹವು ತೋರುವುದು

ರಾಮಾನುಜ—ಬೇಗ ನಡೆಯಿರಿ, ಹೋಗಿ ವಿಚಾರಿಸುವ.

ಮಹಾಪೂರ್ಣ—ಬನ್ನಿ ಹೋಗುವ (ದಾರಿಯಲ್ಲಿ ಒಬ್ಬನನ್ನು ಸಂಭೋದಿಸಿ) ಈ ದೊಡ್ಡ ಗುಂಪಿಗೆ ಕಾರಣವೇನು ?

ದಾರಿಹೋಕ—ಏನೆಂದು ಹೇಳಲಿ ? ಅಮೂಲ್ಯವಾದ ರತ್ನವು ಕಳೆದುಹೋಯಿತು

ರಾಮಾನುಜ—ಏನು ? ಹಾಗೆಂದರೆ ?

ದಾರಿಹೋಕ—ಪೂಜ್ಯರಾದ ಆಳವಂದಾರ್ಯರು ಭಗವಂತನ ಪಾದಾರವಿಂದ ಸೇರಿದರು. ಪಂಚಭೂತಗಳಲ್ಲಿ ಐಕ್ಯರಾದರು

ರಾಮಾನುಜ—ಹಾ ? ಅಯ್ಯೋ ! ಗುರುಗಳೇ ನಾನೆಂತಹ ಪಾಪಿ ! (ಎಂದು ಪ್ರಜ್ಞೆ ತಪ್ಪಿ ಬೀಳುವರು )

ಮಹಾಪೂರ್ಣ—(ಎರಡೂ ಕೈಗಳಿಂದ ಹಣೆ ಹಣೆ ಚಚ್ಚಿಕೊಳ್ಳುತ್ತಾ ಗಟ್ಟಿಯಾಗಿ)

ಓ ನನ್ನ ದೇವರೆ ! ನೀನು ನಿಷ್ಕರುಣಿ ನನ್ನನ್ನು ದೂರ ಅಟ್ಟಿ ನನ್ನ ಗುರುಗಳನ್ನು ಕಿತ್ತುಕೊಂಡೆ ಗುರುಗಳೇ ನಿಮ್ಮ ಕೊನೆ ಘಳಿಗೆಯಲ್ಲಿ ಪಾದಸೇವೆಯಿಂದ ವಂಚಿತನನ್ನಾಗಿ ಮಾಡಿದ್ದೀರಾ ? ಅಯ್ಯೋ ದುರ್ದೈವವೇ ! (ಎಂದು ರೋದಿಸುವರು ಹಾಗೆಯೇ ತನ್ನನ್ನು ಸುಧಾರಿಸಿಕೊಂಡು ಪಕ್ಕದಲ್ಲಿ ತಿರುಗಿ ನೋಡುವರು. ಪ್ರಜ್ಞಾಹೀನರಾದ ರಾಮಾನುಜರನ್ನು ನೋಡಿ) ಅಯ್ಯೋ ! ರಾಮಾನುಜ ನೀನು ಪ್ರಜ್ಞೆಯನ್ನು ಕಳೆದುಕೊಂಡೆಯಾ ? ಸ್ವಲ್ಪ ನೀರನ್ನು ತರಿಸಿ ಅಭಿಮಂತ್ರಿಸಿ ಸಿಂಪಡಿಸುವರು ರಾಮಾನುಜರು ನಿಧಾನವಾಗಿ ಕಣ್ಣು ತೆರೆಯುವರು. ಎದ್ದು ಬಿಕ್ಕಿ ಬಿಕ್ಕಿ ಅಳುತ್ತಾ)

ರಾಮಾನುಜ—ಪೂಜ್ಯರೇ ಈಗ ನನ್ನ ಗುರುಗಳ ಪವಿತ್ರ ಶರೀರವು ಎಲ್ಲಿ ?

ಮಹಾಪೂರ್ಣ—ಅಳಬೇಡ ನನ್ನ ಕಂದ ಎಲ್ಲಾ ಶ್ರೀಮನ್ನಾರಾಯಣನ ಇಚ್ಛೆ ಆ ಭಗವಂತನ ಆಜ್ಞೆಗೆ ತಲೆಬಾಗಿ ನಡೆಯುವುದು ಒಳ್ಳೆಯದು ನಡೆ

ಬೇಗ ಹೋಗೋಣ. ಗುರುಗಳ ಶರೀರವು ಭೂತಾಯಿಯ ಮಡಿಲಿಗೆ ಸೇರುವ ಮುನ್ನ ದರ್ಶನಮಾಡೋಣ ಕಾವೇರಿ ತೀರಕ್ಕೆ ಹೋಗೋಣ

(ಇಬ್ಬರೂ ತೆರಳುವರು)

(ತೆರೆಬೀಳುವುದು)

## ದೃಶ್ಯ—೬

(ಕಾವೇರಿತೀರ ಆಳವಂದಾರರ ಚರಮ ಶರೀರವು ಭೂಮಿಯಮೇಲೆ ಇಟ್ಟಿರುವುದು. ಅವರ ಮುಖದಲ್ಲಿ ದೇದೀಪ್ಯಮಾನವಾದ ಕಳೆಯು ಗೋಚರಿಸುವುದು. ಶ್ರೀ ಮಹಾಪೂರ್ಣರು ತಮ್ಮ ಗುರುಗಳಿಗೆ ವಂದಿಸಿ, ಪಾದಗಳಿಗೆ ಕಣ್ಣೀರಿನ ಅಭಿಷೇಕ ಮಾಡುವರು. ಶ್ರೀರಾಮಾನುಜರು ತದೇಕ ದೃಷ್ಟಿಯಿಂದ ಆಳವಂದಾರರನ್ನು ನೋಡುತ್ತಾ ಕಣ್ಣೀರು ಸುರಿಸುತ್ತಿರುವರು.

ಮಹಾಪೂರ್ಣ—ರಾಮಾನುಜ ಏಕೆ ಹಾಗೆ ಗುರುಗಳನ್ನು ದೃಷ್ಟಿಸುತ್ತಿರುವೆ? ಏಕೆ ಅಳುತ್ತಿರುವೆ ?

ರಾಮಾನುಜ—(ಮೌನ)

ತಿರುವರಂಗ—ಮಹಾಪೂರ್ಣ ಅಲ್ಲಿ ನೋಡು ರಾಮಾನುಜರು ದೃಷ್ಟಿಸುತ್ತಿರುವುದನ್ನು ನೋಡಿದರೆ ನಮ್ಮ ಗುರುಗಳೊಡನೆ ಮೌನ ಭಾಷೆ ಆಡುವಂತಿದೆ.

ಮಹಾಪೂರ್ಣ—ಗುರುಗಳೇನಾದರೂ ಸಂದೇಶ ನೀಡುತ್ತಿರುವರೋ ಏನೋ ?

ರಾಮಾನುಜ—(ಕೆಲವು ಕ್ಷಣಗಳ ನಂತರ ಆಳವಂದಾರರ ಬಲಹಸ್ತದ ಕಡೆ ದೃಷ್ಟಿಯನ್ನು ಹರಿಸಿ ಆಶ್ಚರ್ಯದಿಂದ) ಪೂಜ್ಯರು ಮುಷ್ಟಿಯನ್ನು ಹೀಗೆ ಬಿಗಿ ಹಿಡಿದಿದ್ದರೇನು ? ಜೀವಂತವಾಗಿರುವಾಗ ಯಾವಾಗಲಾದರೂ ಈ ರೀತಿ ಮಾಡಿದುದುಂಟಾ ?

ತಿರುವರಂಗ—ಎಂದೂ ಹೀಗೆ ಮಾಡಿದುದಿಲ್ಲ, ಆದರೆ ಈದಿನ ಏಕೆ ಹೀಗಾಯಿತು ? ಎಂಬುದೇ ಗೊತ್ತಾಗಲಿಲ್ಲವಲ್ಲಾ !

ರಾಮಾನುಜ—(ಗುರುಗಳನ್ನು ಧ್ಯಾನಮಾಡಿ ಏನನ್ನೋ ಜ್ಞಾಪಿಸಿಕೊಂಡ ಹಾಗೆಮಾಡಿ ಗುರುಗಳ ಪಾದಕಮಲದ ಬಳಿ ಬಂದು ನಿಂತು)

ಗುರುಗಳೇ ! ನಾನು ವೈಷ್ಣವ ಮತದಲ್ಲೇ ಸ್ಥಿರವಾಗಿ ನಿಂತು ಅಜ್ಞಾನಾಂಧಕಾರದಲ್ಲಿ ಮುಳುಗಿರುವವರನೆಲ್ಲಾ, ಪಂಚ ಸಂಸ್ಕಾರಮಾಡಿ ವೈಷ್ಣವ ದೀಕ್ಷೆ ಇತ್ತು. ದ್ರಾವಿಡ ವೇದವನ್ನು ಕಲಿಸುತ್ತೇನೆ. ಮತ್ತೆ ಶ್ರೀಮನ್ನಾರಾಯಣನ ಚರಣಾರವಿಂದವನ್ನು ಆಶ್ರಯಿಸಿ ಉಜ್ಜೀವಿಸುವಂತೆ ಪ್ರೋತ್ಸಾಹಿಸುತ್ತೇನೆ ಇದು ನನ್ನ ಮೊದಲನೆಯ ಪ್ರತಿಜ್ಞೆ (ಕೂಡಲೇ ಆಳವಂದಾಳ್ವಾರರ ಒಂದು ಬೆರಳು ನೇರಾಗುವುದು)

ಮಹಾಪೂರ್ಣ—ಆಶ್ಚರ್ಯ, ಆಶ್ಚರ್ಯ! ತಿರುವರಂಗರೇ ಅಗೋ ನೋಡಿ, ಗುರುಗಳ ಮಡಿಸಿದ ಬೆರಳೊಂದು ಮುಷ್ಟಿಯಿಂದ ಬಿಡಿಸಲ್ಪಟ್ಟುನಿಂತಿದೆ.

ತಿರುವರಂಗ—ಪರಮಾಶ್ಚರ್ಯ!

ರಾಮಾನುಜ—ಇದು ನನ್ನ ಎರಡನೆ ಪ್ರತಿಜ್ಞೆ. ವಿಶ್ವದ ಮಂಗಳಕ್ಕಾಗಿ, ಸಕಲ ಶಾಸ್ತ್ರಾರ್ಥಗಳನ್ನು ಸಂಗ್ರಹಿಸಿ, ಸಕಲರಿಗೂ ಅರ್ಥವಾಗುವಂತೆ ಬ್ರಹ್ಮ ಸೂತ್ರಕ್ಕೆ ಸರ್ವಮಂಗಳವಾದ, ಸತ್ಯವಾದ ತತ್ವಾರ್ಥವನ್ನು ತಿಳಿದು ಹೇಳುವಂತ ಶ್ರೀ ಭಾಷ್ಯವನ್ನು ಬರೆಯುತ್ತೇನೆ.

(ಮತ್ತೊಂದು ಮಡಿಸಿರುವ ಬೆರಳು ನೇರವಾಗಿ ನಿಲ್ಲುವುದು.)

ಒಬ್ಬ-ಶಿಷ್ಯ—ಮಹದಾಶ್ಚರ್ಯ ಗುರುಗಳ ಇನ್ನೊಂದು ಬೆರಳು ಎದ್ದು ನಿಂತಿತು.

ರಾಮಾನುಜ—ಮುನಿಶ್ರೇಷ್ಠರಾದ ಪರಾಶರರು ಈಶ್ವರ, ಜೀವ, ಜಗತ್ತು, ಭೋಗ, ಮೋಕ್ಷ ಮೊದಲಾದುದನ್ನು ಪಡೆಯುವ ಮಾರ್ಗದ ಬಗ್ಗೆ ಸರಳವಾಗಿ ತಿಳಿಸಿರುವ ಪುರಾಣರತ್ನವೆಂದು ಕರೆಯುವ "ವಿಷ್ಣು ಪುರಾಣ" ರಚಿಸಿರುವರು. ಅವರಲ್ಲಿ ನನ್ನ ಕೃತಜ್ಞತೆ ಅರ್ಪಿಸಲು ಒಬ್ಬ ಶ್ರೇಷ್ಠಭಕ್ತರಿಗೆ ಆ ಹೆಸರನ್ನಿಡುವೆನು. ಇದೇ ನನ್ನ ಮೂರನೆಯ ಪ್ರತಿಜ್ಞೆಯು (ರಾಮಾನುಜರು ಹೇಳುತ್ತಿರುವಂತೆಯೇ ಮತ್ತೊಂದು ಬೆರಳೂ ನಿಂತಿತು) ನಾನಿನ್ನು ಬರುತ್ತೇನೆ. (ಹೊರಡುವರು.)

ತಿರುವರಂಗ—ರಾಮಾನುಜ ಹಾಗೆ ಮಾಡಬೇಡ ಶ್ರೀರಂಗನಾಥರ ದರ್ಶನಮಾಡಿ ಹೋಗು.

ರಾಮಾನುಜ—ನನ್ನ ಹೃದಯದಲ್ಲಿಟ್ಟು ಪೂಜಿಸಿದ ಗುರುಗಳಿಗೆ ನಾನು ನಮಸ್ಕರಿಸುವ ಮೊದಲೇ ಯಾವ ದೇವನು ತನ್ನ ಪಾದಕ್ಕೆ ಸೇರಿಸಿಕೊಂಡನೋ ಅವನನ್ನು ನಾನು ದರ್ಶನಮಾಡುವುದಿಲ್ಲ. (ಗಳ ಗಳ ಎಂದು ಕಣ್ಣೀರು ಸುರಿಸುತ್ತಾ ಹೊರಟುಹೋಗುವರು. ಎಲ್ಲರೂ ಆಶ್ಚರ್ಯದಿಂದ ನೋಡುತ್ತಾ ನಿಲ್ಲುವರು.)

(ತೆರೆಬೀಳುವುದು)



# ಅಂಕ—೩

## ದೃಶ್ಯ—೧

[ಕಾಂಚೀಪುರ ಶ್ರೀ ವರದರಾಜಸ್ವಾಮಿಯ ದೇವಸ್ಥಾನದ ಪೊರಾಂಗಣ ಕೆಲವು ಭಕ್ತರು ಹೊರಕ್ಕೂ ಕೆಲವು ಭಕ್ತರು ಒಳಕ್ಕೂ ಹೋಗಿ ಬರುತ್ತಿರುವರು. ಕಾಂಚೀಪೂರ್ಣರು ಒಂದೆಡೆಕುಳಿತು ಭಗವದ್ಧ್ಯಾನದಲ್ಲಿ ಲೀನರಾಗಿರುವರು. ರಾಮಾನುಜರು ಬಂದು ಕಾಂಚೀಪೂರ್ಣರಿಗೆ ಸಾಷ್ಟಾಂಗ ಪ್ರಣಾಮಮಾಡಿ.)

ರಾಮಾನುಜ—ಗುರುಗಳೇ

ಕಾಂಚೀಪೂರ್ಣ—(ಕಣ್ತೆರೆದು ರಾಮಾನುಜ ಇದೇನು ಹೀಗೆ ನನಗೆ ಪ್ರಣಾಮಮಾಡುತ್ತಿರುವೆ ? ಶಾಂತಂಪಾಪಂ ಶಾಂತಂಪಾಪಂ, ಭಗವಂತಾ ನೀನೇ ತೆಗೆದುಕೋ (ಎಂದು ಕೈಮುಗಿಯುವರು)

ರಾಮಾನುಜ—ಏಕೆ ಗುರುಗಳೆ, ಹೀಗೆ ಹೇಳುವಿರಿ ? ನಾನೇಕೆ ನಮಸ್ಕರಿಸಬಾರದು.

ಕಾಂಚೀಪೂರ್ಣ—ರಾಮಾನುಜರೇ, ತಾವು ಭಗವದ್ಭಕ್ತರು, ಸಕಲಶಾಸ್ತ್ರ ಪಂಡಿತರು, ಭಾಗವತೋತ್ತಮರು, ಅದೂ ಅಲ್ಲದೆ ಉತ್ತಮಕುಲದಲ್ಲಿ ಜನಿಸಿದ ಬ್ರಾಹ್ಮಣರು.

ರಾಮಾನುಜ—ಏಕೆ ಹಾಗೆ ಹೇಳುವಿರಿ ? ಈ ರೀತಿ ಸಲ್ಲದ ಹೊಗಳಿಕೆ ಏಕೆ ?

ಕಾಂಚೀಪೂರ್ಣ—ನಾನಾದರೋ ವೈಶ್ಯಕುಲದಲ್ಲಿ ಜನಿಸಿದವನು. ಆದುದರಿಂದ ನನಗೆ ನೀವು ನಮಸ್ಕರಿಸಬಾರದು

ರಾಮಾನುಜ—ತಮ್ಮಂತಹ ಭಕ್ತರು ನನಗೆಲ್ಲಿ ದೊರೆಯುವರು? ತಾವಾದರೋ ಯಾವಾಗಲೂ ಶ್ರೀ ವರದರಾಜಸ್ವಾಮಿಯ ಜೊತೆ ಮಾತಾಡುತ್ತಿರುತ್ತೀರಿ.

ಕಾಂಚೀಪೂರ್ಣ—ಮಾತಾಡಿದರೆ ಜಾತಿಯು ಹೋಗುವುದೇ ?

ರಾಮಾನುಜ—ಭಗವಂತನಲ್ಲಿ ಭಕ್ತಿ ಇಲ್ಲದ ಜಾತಿಯು ಏಕೆ ? ಅದಿರಲಿ, ತಮ್ಮ ತಿರುಪತಿ ಪ್ರವಾಸವು ಚೆನ್ನಾಗಿದ್ದಿತೆ ?

ಕಾಂಚೀಪೂರ್ಣ—ಪ್ರವಾಸವೇನೋ ಚೆನ್ನಾಗಿದ್ದಿತು. ಆದರೆ ಮನಸ್ಸಿಗೇ ನೆಮ್ಮದಿ ಇರಲಿಲ್ಲ

ರಾಮಾನುಜ—ಏಕೆ ಶ್ರೀ ವೆಂಕಟೇಶ್ವರನ ಸನ್ನಿಧಿಯಲ್ಲಿ ತಮ್ಮ ಭಕ್ತಿ ಪ್ರಕಾಶನಕ್ಕೆ ಅವಕಾಶವಿರಲಿಲ್ಲವೆ ?

ಕಾಂಚೀಪೂರ್ಣ—ಭಕ್ತಿಗೆ ಅವಕಾಶವಿಲ್ಲದೇ ಏನು ? ತಿರುಪತಿಯು ಮೋಕ್ಷಕ್ಕೆ ರಾಜಮಾರ್ಗವಲ್ಲವೇ ? ಆದರೆ ನನ್ನ ಮನಸ್ಸು ಶ್ರೀ ವರದರಾಜಸ್ವಾಮಿ

ಯಲ್ಲಿ ನೆಟ್ಟಿರುವುದರಿಂದ ಅಲ್ಲೇ ಮನಸ್ಸು ಎಳೆಯುತ್ತಿದೆ. ಅವನದೇ ಧ್ಯಾನ. ಯಾವಾಗಲೂ ಅವನು ಕರೆಯುವ ಹಾಗೆ ಆಗುತ್ತಿತ್ತು

ರಾಮಾನುಜ—ಒಳ್ಳೆಯದಾಯಿತು ತಾವು ಬಂದದು ನನಗೂ ತಮ್ಮ ಧ್ಯಾನವೇ ಆಗಿತ್ತು. ತಾವು ಬಂದರಲ್ಲಾ! ಭಗವಂತನ ಕೃಪೆ ಬಹಳ ದೊಡ್ಡದು

ಕಾಂಚೀಪೂರ್ಣ—ಅಷ್ಟೇ ಅಲ್ಲ, ಭಗವಂತನು ಕನಸ್ಸಿನಲ್ಲಿ ಬರುವುದು ಮಾತ್ರವಲ್ಲದೆ (ನಿನ್ನಂತಹ ಭಕ್ತ), ನನ್ನ ಬಿಟ್ಟು ಹೊರಟುಹೋದೆಯಲ್ಲಾ! ನನಗೆ ಬಹಳ ಸೆಖೆಯಾಗುತ್ತಿದೆ ಗಾಳಿ ಹಾಕುವವರಿಲ್ಲ, ಬೇಗ ಬಾ ಎಂದು ಕರೆದ ಅದಕ್ಕಾಗಿ ಬಂದೆ

ರಾಮಾನುಜ—ಬಂದರಲ್ಲಾ ಬಹಳ ಸಂತೋಷ ನನಗೂ ತಮ್ಮದೇ ಚಿಂತೆಯಾಗಿತ್ತು ನಾನು ಶ್ರೀಮಾನ್ ಆಳವಂದಾರರಿಗೆ ಇತ್ತ ಪ್ರತಿಜ್ಞೆಯನ್ನು ಹೇಗೆ ನೆರವೇರಿಸಲಿ ಎಂದು ಚಿಂತಿಸುತ್ತಿದ್ದೆ ತಾವು ನನ್ನ ಗುರುಗಳು ಮಾರ್ಗ ದರ್ಶಕರು ತಮ್ಮ ಮಾರ್ಗದರ್ಶನವೂ ತಪ್ಪಿತಲ್ಲಾ ಎಂದೂ ಪರಿ ತಪಿಸುತ್ತಿದ್ದೆ

ಕಾಂಚೀಪೂರ್ಣ—ಹಾಗೆಲ್ಲಾ ಅನ್ನಬೇಡ ನಿನ್ನ ಜ್ಞಾನದ ಮುಂದೆ ನನ್ನದೇನಿದೆ!

ರಾಮಾನುಜ—ನನ್ನ ಮನೋತುಮುಲವನ್ನರಿತು ಭಗವಂತ ತಮ್ಮನ್ನು ಕರೆಸಿದ್ದಾನೆ. ತಮ್ಮಿಂದರೇ ನನ್ನ ಕಾರ್ಯಸಾಧನೆಯಾಗಬೇಕು

ಕಾಂಚೀಪೂರ್ಣ—ಅದೇನು? ಅದು ಹೇಗೆ?

ರಾಮಾನುಜ—ಗುರುಗಳೇ, ತಾವು ಭಗವಂತನ ಜೊತೆ ಮಾತಾಡುತ್ತಿರುತ್ತೀರಿ. ನನಗೆ ಬಹಳ ದಿನಗಳಿಂದಲೂ ನನ್ನ ಪ್ರತಿಜ್ಞೆ ಹೇಗೆ ನಡೆಸುವುದು ಎಂದು ಮನಸ್ಸು ಬಾಧಿಸುತ್ತಿರುವುದು ತಾವು ಶ್ರೀ ವರದರಾಜರ ಬಳಿ ನನ್ನ ಸಂದೇಹವನ್ನು ನಿವೇದಿಸಿ ಪರಿಹರಿಸುವಿರಾ?

ಕಾಂಚೀಪೂರ್ಣ—ನಿನ್ನ ಮನಃಕ್ಲೇಶವನ್ನು ಪರಿಹರಿಸಲು ಪ್ರಯತ್ನಪಡುತ್ತೇನೆ ಆ ಭಗವಂತನ ಬಳಿ ನಿವೇದಿಸುತ್ತೇನೆ.

ರಾಮಾನುಜ—ಈ ಒಂದು ಮಹದುಪಕಾರ ಮಾಡಿದರೆ ನಾನೇ ಧನ್ಯ ಮತ್ತೆ ನಾನು ಯಾವಾಗ ಬರಲಿ?

ಕಾಂಚೀಪೂರ್ಣ—ನಾಳೆ ಬನ್ನಿರಿ.

ರಾಮಾನುಜ—ನಾನಿನ್ನು ಬರುವೆನು (ಎಂದು ಹೋಗುವರು)

ಕಾಂಚೀಪೂರ್ಣ—ಆಹಾ! ಈ ಭಗವದ್ಭಕ್ತನ ಮನೋತುಮುಲವನ್ನು ನೋಡಲಾರೆ. ಭಗವಂತಾ ನೀನೇ ಅನುಗ್ರಹಿಸು (ಎಂದು ತೆರಳುವರು)

(ತೆರೆ ಬೀಳುವುದು)

## ದೃಶ್ಯ — ೩

[ಕಂಚೀ ದೇವಸ್ಥಾನದ ಹೊರಾಂಗಣ ಕಾಂಚೀಪೂರ್ಣರು ಯಾರನ್ನೋ ಎದುರು ನೋಡುತ್ತಿರುವರು ]

ಕಾಂಚೀಪೂರ್ಣ—ಏಕೆ ಇನ್ನೂ ಬರಲಿಲ್ಲ ? ನನ್ನ ಮನಸ್ಸು ಆತುರಗೊಳ್ಳುತ್ತಿರುವುದು ಆ ಭಗವಂತನ, ಶ್ರೀ ವರದರಾಜಸ್ವಾಮಿಯ ಸಂದೇಶ ತಿಳಿಸಲು ಹಾತೊರೆಯುತ್ತಿದೆ (ಸ್ವಲ್ಪಹೊತ್ತು ಬೀದಿಯನ್ನೇ ದೃಷ್ಟಿಸಿ,) ಓ ಭಕ್ತಾಗ್ರಣಿ ಬರುತ್ತಿರುವರು !

ರಾಮಾನುಜ—(ದೀರ್ಘದಂಡ ಪ್ರಣಾಮಮಾಡಿ) ಗುರುವರೇಣ್ಯ ವಂದಿಸುವೆನು.

ಕಾಂಚೀಪೂರ್ಣ—ಭಗವಂತಾ ನೀನೇ ತೆಗೆದುಕೊ ಎಷ್ಟುಬಾರಿ ಹೇಳಿದರೂ ಇವರು ಬಿಡರು ರಾಮಾನುಜರೇ ಬಂದಿರಾ, ನಾನು ನಿಮಗಾಗಿಯೇ ಕಾಯುತ್ತಿರುವೆನು

ರಾಮಾನುಜ—ಪೂಜ್ಯರೇ ನನ್ನ ಮನದಳಲನ್ನು ಶ್ರೀ ವರದರಾಜನಲ್ಲಿ ನಿವೇದಿಸಿದಿರಾ ?

ಕಾಂಚೀಪೂರ್ಣ—ರಾಮಾನುಜರೇ ಭಗವಂತನು ಪ್ರಸನ್ನನಾಗಿ ತಮಗೆ ಪರಿಹಾರ ಮಾರ್ಗವನ್ನು ಸೂಚಿಸಿರುವನು

ರಾಮಾನುಜ—(ಆನಂದ ಉತ್ಸಾಹದಿಂದ) ಗುರುಗಳೇ, ಪೂಜ್ಯರೇ ಬೇಗ ಅನುಗ್ರಹಿಸುವವರಾಗಿ.

ಕಾಂಚೀಪೂರ್ಣ—ಭಗವಂತನು ನಿಮಗೆ ಆರು ವಿದಾಯಕಗಳನ್ನು ಅರುಹಿಸಿರುವನು

ರಾಮಾನುಜ—ಅರುಹಿ ಪೂಜ್ಯರೆ ?

ಕಾಂಚೀಪೂರ್ಣ—ಅವು ಕ್ರಮೇಣವಾಗಿ, ಈ ಜಗತ್ತಿಗೆ ಕಾರಣ ಮತ್ತು ಕಾರಣಕರ್ತನಾಗಿರುವ ಪರಬ್ರಹ್ಮ ನಾನೇ.

ರಾಮಾನುಜ—ನನ್ನ ಒಂದು ಸಂದೇಹವು ನಿವೃತ್ತಿಯಾಯಿತು ಜಗತ್ತಿಗೆ ಕಾರಣನೂ ಪರಬ್ರಹ್ಮನೇ ಅಲ್ಲವೆ ?

ಕಾಂಚೀಪೂರ್ಣ—ಜೀವ ಮತ್ತು ಈಶ್ವರ ಇವುಗಳಲ್ಲಿರುವ ಭೇದ ಸ್ವತಃ ಸತ್ಯವಾದುದು.

ರಾಮಾನುಜ—ನಮ್ಮ ಗುರುಗಳಾದ ಯಾದವಪ್ರಕಾಶರು ಜೀವ ಮತ್ತು ಈಶ್ವರ ಅಭಿನ್ನ ಎಂದು ಹೇಳುತ್ತಿದ್ದರು. ಆದರೆ ನನಗೆ ಇದರಲ್ಲಿ ಸಂದೇಹವು ತಲೆದೋರುತ್ತಿತ್ತು. ಈ ಬಗ್ಗೆ ವಾದವಿವಾದವು ನಡೆಯುತ್ತಿತ್ತು. ಈದಿನ ನಾನು ಸರಿಯಾಗಿ ಅರಿತೆ.

ಕಾಂಚೀಪೂರ್ಣ—ಮೋಕ್ಷಾಪೇಕ್ಷಿಗೆ ತನ್ನನ್ನು ಶ್ರೀಮನ್ನಾರಾಯಣನ ಪಾದಾರವಿಂದಗಳಲ್ಲಿ ಅರ್ಪಿಸುವುದೊಂದೇ ಉಪಾಯ

ರಾಮಾನುಜ—ಮತ್ತೇನು ?

ಕಾಂಚೀಪೂರ್ಣ—ಅಂತಿಮಕಾಲದಲ್ಲಿ ನನ್ನ ಭಕ್ತರು ನನ್ನ ಸ್ಮರಣೆಯನ್ನು ಮರೆತರೂ ನಾನವರಿಗೆ ಮುಕ್ತಿಕೊಡುವುದು ನಿಶ್ಚಯ

ರಾಮಾನುಜ—ಆಹಾ ! ಭಗವಂತನ ಕೃಪೆಯನ್ನು ನಾನು ಏನೆಂದು ಹೇಳಲಿ ?

ಕಾಂಚೀಪೂರ್ಣ—ನನ್ನ ಭಕ್ತರು ದೇಹತ್ಯಾಗ ಮಾಡಿದಮೇಲೆ ಅವರಿಗೆ ಪರಮಪದ ವನ್ನು ಅನುಗ್ರಹಿಸುತ್ತೇನೆ.

ರಾಮಾನುಜ—ಭಕ್ತಿಮಾರ್ಗ ಪ್ರಸಾರಕ್ಕೆ ಎಷ್ಟು ಒಳ್ಳೆಯ ಸಂದೇಶ !

ಕಾಂಚೀಪೂರ್ಣ—ಶ್ರೀ ಮಹಾಪೂರ್ಣರು ಎಲ್ಲಾ ಉತ್ತಮ ಗುಣಗಳಿಂದ ಕೂಡಿರುವರು ಅವರ ಆಶ್ರಯ ಪಡೆದು ನೀನು ಪುನೀತನಾಗು ಇವೇ ಭಗವಂತನ ಆರುಸಂದೇಶಗಳು

ರಾಮಾನುಜ—ಪೂಜ್ಯರೇ ನಾನು ಧನ್ಯ, ನಾನು ಧನ್ಯ ಎಂದು (ಹುಚ್ಚುಚ್ಚಾಗಿ ಕುಣಿದಾಡುವರು ಆಗಾಗ್ಗೆ ವರದರಾಜಸ್ವಾಮಿಗೆ ನಮಸ್ಕರಿಸುತ್ತಾ) ಭಗವಂತಾ ನಾನು ಪುನೀತನಾದೆ ಭಕ್ತಿಮಾರ್ಗದ ದಾರಿದೀವಿಗೆ ಪಡೆದೆ. (ಎಂದು ಹುಚ್ಚರಹಾಗೆ ಕುಣಿದಾಡುವರು )

ಕಾಂಚೀಪೂರ್ಣ—ರಾಮಾನುಜರೇ ! ಏನಾಯಿತು ನಿಮಗೆ ! ಏಕೆ ಹೀಗೆ ಕುಣಿಯುವಿರಿ ?

ರಾಮಾನುಜ—(ಸ್ವಲ್ಪಹೊತ್ತು ಹಾಗೇ ಕುಣಿದಾಡುತ್ತಿರುವರು )

ಕಾಂಚೀಪೂರ್ಣ—ರಾಮಾನುಜರೇ ! ರಾಮಾನುಜರೇ ! (ಸಮೀಪಿಸಿ ಮೈದಡವುವರು)

ರಾಮಾನುಜ—(ಚೇತರಿಸಿಕೊಂಡು) ಪೂಜ್ಯರೇ ನಾನಿನ್ನು ಬರುವೆ ಈಗಲೇ ಮಹಾ ಪೂರ್ಣರ ಬಳಿ ತೆರಳುವೆ. ಶ್ರೀರಂಗಕ್ಕೆ ಪೋಗುವ (ನಾಗಾಲೋಟ ದಿಂದ ಓಡುವರು )

ಕಾಂಚೀಪೂರ್ಣ—ಭಕ್ತ ಪರಾಧೀನನಾದ ಶ್ರೀ ವರದರಾಜಸ್ವಾಮಿಯು ಅನುಗ್ರಹಿಸಲಿ.

(ರಾಮಾನುಜರು ಹೋದ ದಿಕ್ಕನ್ನೇ ನೋಡುತ್ತಾ ನಿಲ್ಲವರು)

(ತೆರೆಬೀಳುವುದು)

## ದೃಶ್ಯ—೩

[ಕಾಂಚೀಪುರದ ಒಂದು ಬೀದಿ ಇಬ್ಬರು ನಗರವಾಸಿಗಳು ಮಾತಾಡುತ್ತಾ, ಬರುತ್ತಿರುವರು ]

ಮೊದಲನೆಯವನು—ಮಿತ್ರರೇ ನೀವು ಈ ಸಮಾಚಾರವನ್ನು ಕೇಳಿದಿರಾ ?

ಎರಡನೆಯವನು—ಅದೇನು ಅಂತಹ ಆಶ್ಚರ್ಯಪಡುವ ವಿಷಯ ?

ಮೊದಲನೆಯವನು—ರಾಮಾನುಜರು ಗುರುವಿನಿಂದ ದೀಕ್ಷೆಪಡೆದರಂತೆ

ಎರಡನೆಯವನು—ಯಾರು ಅವರ ಗುರುಗಳು ?

ಮೊದಲನೆಯವನು—ಅವರ ಗುರುಗಳು ಮಹಾಪೂರ್ಣರಂತೆ.

ಎರಡನೆಯವನು—ಯಾರು ಅವರಿಗೆ ಈ ಸಂದೇಶ ನೀಡಿದವರು ?

ಮೊದಲನೆಯವನು—ಕಾಂಚೀಪೂರ್ಣರಿಗೆ ಶ್ರೀ ವರದರಾಜಸ್ವಾಮಿಗಳು ಸಂದೇಶ ನೀಡಿದರಂತೆ ಶ್ರೀ ಮಹಾಪೂರ್ಣರೇ ರಾಮಾನುಜರಿಗೆ ತಕ್ಕ ಗುರುಗಳಂತೆ ಅವರಲ್ಲೇ ದೀಕ್ಷೆಪಡೆಯಬೇಕೆಂದು ಹೇಳಿದರಂತೆ.

ಎರಡನೆಯವನು—ಎಲ್ಲಿ ಹೇಗೆ ಪಡೆದರು ?

ಮೊದಲನೆಯವನು—ಮಧುರಾಂತಕದ ದೇವಾಲಯದ ಬಳಿ ಇರುವ ವಿಷ್ಣು ದೇವಾಲಯದ ಬಳಿ ಶಾಸ್ತ್ರೋಕ್ತವಾಗಿ ವೈಷ್ಣವ ದೀಕ್ಷೆಯನ್ನು ಪಡೆದರಂತೆ.

ಎರಡನೆಯವನು—ಈಗ ರಾಮಾನುಜರು ಎಲ್ಲಿರುವರು ?

ಮೊದಲನೆಯವನು—ರಾಮಾನುಜರು ಕಂಚಿಯಲ್ಲಿರುವರಂತೆ ? ಶ್ರೀ ಮಹಾಪೂರ್ಣರು ಮತ್ತು ಅವರ ಧರ್ಮಪತ್ನಿಯನ್ನು ತಮ್ಮ ಮನೆಯಲ್ಲೇ ಇಟ್ಟುಕೊಂಡು ಅವರಿಂದ ತಮಿಳು ಪ್ರಬಂಧವನ್ನು ಅಧ್ಯಯನ ಮಾಡುತ್ತಿರುವರಂತೆ

ಎರಡನೆಯವನು—ಶ್ರೀ ಯಾದವಪ್ರಕಾಶರು ರಾಮಾನುಜರನ್ನು ಕಳುಹಿಸಿದ ಬಳಿಕ ರಾಮಾನುಜರು ಗುರುಗಳನ್ನು ಅರಸುತ್ತಾ ಪರಿತಪಿಸುತ್ತಿದ್ದರು. ಈಗಂತೂ ಅವರ ವ್ಯಾಸಂಗವು ಯಾವೊಂದು ಆತಂಕವೂ ಇಲ್ಲದೆ ಸಾಗುತ್ತಿದೆಯಲ್ಲವೆ ?

ಮೊದಲನೆಯವನು—ಅದು ಏನೆಂದು ಹೇಳಲಿ ! ಆರು ತಿಂಗಳಲ್ಲೇ ರಾಮಾನುಜರು ಎಲ್ಲಾ ತಮಿಳ ಪ್ರಬಂಧಗಳನ್ನು ಅಧ್ಯಯನ ಮಾಡಿರುವರು

ಎರಡನೆಯವನು—ಆ ತಮಿಳ್ ಪ್ರಬಂಧಗಳು ಯಾವುವೆಂದು ತಿಳಿಸುವಿರಾ ?

ಮೊದಲನೆಯವನು—ಶ್ರೀ ಪೊಯ್ಗೈ ಆಳ್ವಾರು ರಚಿಸಿರುವ ನೂರು ಪದ್ಯಗಳು ಶ್ರೀ ಭೂತತ್ತಾಳ್ವಾರ್ರು ರಚಿಸಿರುವ ನೂರು ಪದ್ಯಗಳನ್ನು ಅಧ್ಯಯನ ಮಾಡಿದರು

ಎರಡನೆಯವನು—ಆದರೆ ಪೆರಿಯಾಳ್ವಾರ್‌ರ ಪದ್ಯಗಳನ್ನು ಅಧ್ಯಯನ ಮಾಡಲಿಲ್ಲವೇ?

ಮೊದಲನೆಯವನು—ಹಾಗೆಲ್ಲಾದರೂ ಉಂಟೆ ಪೆರಿಯಾಳ್ವಾರ್‌ರವರ ನಾನೂರ ಐವತ್ಮೂರು ಪದ್ಯಗಳನ್ನು ಬಹಳ ಚೆನ್ನಾಗಿ ಅಧ್ಯಯನಮಾಡಿದರು.

ಎರಡನೆಯವನು—ಮತ್ತೆ ಯಾವ ಯಾವ ಪದ್ಯಗಳನ್ನು ಅಧ್ಯಯನಮಾಡಿದರು

ಮೊದಲನೆಯವನು—ಶ್ರೀ ತಿರುಪ್ಪಾಣಿಯಾಳ್ವಾರ್ ಶ್ರೀ ಕುಲಶೇಖರಾಳ್ವಾರ್, ಶ್ರೀ ತಿರುಮಂಗೈಯಾಳ್ವಾರ್ ಮತ್ತು ನಮ್ಮಾಳ್ವಾರ್‌ರವರುಗಳು ರಚಿಸಿರುವ ಸಾವಿರದ ಇನ್ನೂರತ್ತೊಂಭತ್ತಾರು ಪದ್ಯಗಳಿಂದ ಕೂಡಿದ "ನಾಲಾಯಿರ" ದಿವ್ಯ ಪ್ರಬಂಧ ಎಂಬ ದಿವ್ಯ ಪ್ರಬಂಧವನ್ನು ಅಭ್ಯಸಿಸಿದ್ದಾರೆ

ಎರಡನೆಯವನು—ಆರು ತಿಂಗಳಲ್ಲೇ ಇಷ್ಟೆಲ್ಲಾ ಅಧ್ಯಯನ ಮಾಡಿದರಾ ? ಎಷ್ಟು ಮೇಧಾವಿ ಇರಬಹುದು.

ಮೊದಲನೆಯವನು—ಹೌದು ಬಹಳ ಮೇಧಾವಿಗಳು.

ಎರಡನೆಯವನು—ಮತ್ತೊಂದು ಸಮಾಚಾರ ಕೇಳಿದೆನಲ್ಲಾ ಇಂತಹ ಮೇಧಾವಿಗಳ ಪತ್ನಿಯವರ ವಿಚಾರ ?

ಮೊದಲನೆಯವನು—ಅವರ ಪತ್ನಿಯವರು ಬಹಳ ಆಚಾರಶೀಲರು, ಪತಿಪರಾಯಣರು, ಸಂಪ್ರದಾಯ ಬದ್ಧರು

ಎರಡನೆಯವನು—ಇನ್ನೂ ಒಳ್ಳೆಯದೇ ಆಯಿತಲ್ಲಾ, ಇವರ ವ್ಯಾಸಂಗಕ್ಕೆ ಅನುಕೂಲವಾಯಿತಲ್ಲಾ

ಮೊದಲನೆಯವನು—ಮಹಾಪೂರ್ಣರು ಮತ್ತು ರಾಮಾನುಜರ ಮತಾಚರಣೆಯಲ್ಲಿ ಸ್ವಲ್ಪ ಅಂತರವಿದ್ದಿತಂತೆ

ಎರಡನೆಯವನು—ಆದರೇನು ! ಮಹಾಪೂರ್ಣರು ಬಹಳ ಮೇಧಾವಿಗಳಲ್ಲವೇ ? ಮೇಧಾವಿ ರಾಮಾನುಜರ ಗುರುಗಳು

ಮೊದಲನೆಯವನು—ಅದೇನೋ ಸರಿ, ಆದರೆ ಸಂಪ್ರದಾಯ ಬದ್ಧರಾದ ರಾಮಾನುಜರ ಪತ್ನಿಗೆ ಇದು ಸರಿಬೀಳುತ್ತಿರಲಿಲ್ಲವಂತೆ

ಎರಡನೆಯವನು—ಏನಾಗುತ್ತಿತ್ತು ?

ಮೊದಲನೆಯವನು—ಈ ಇಬ್ಬರು ಮಹಿಳೆಯರಿಗೂ ಆಚಾರವಿಚಾರದಲ್ಲಿ ವಾದವಿವಾದ ನಡೆಯುತ್ತಿತ್ತಂತೆ ಯಾಕೆಂದರೆ ಅವರವರು ಬೆಳೆಸಿಕೊಂಡು ಬಂದ ಪದ್ಧತಿ

ಎರಡನೆಯವನು—ಇದರಿಂದ ಏನಾಯಿತು ?

ಮೊದಲನೆಯವನು—ಒಂದುದಿನ ಇಬ್ಬರಿಗೂ ವಾದವಿವಾದ ಬೆಳೆದು ಮಹಾಪೂರ್ಣರ ಪತ್ನಿ ತನ್ನ ಪತಿಗೆ ಇಲ್ಲಿಂದ ಹೋಗೋಣ ಎಂದು ಹೇಳಿದರಂತೆ

ಎರಡನೆಯವನು—ಆಗ ರಾಮಾನುಜರು ಸುಮ್ಮನಿದ್ದರೋ ? ಹೋಗ ಗೊಟ್ಟರೋ ?

ಮೊದಲನೆಯವನು—ಮಹಾಪೂರ್ಣರಿಗೆ ಗೊತ್ತು ಏನಾದರೂ ರಾಮಾನುಜರು ಹೋಗಗೊಡುವುದಿಲ್ಲವೆಂದು ಅದಕ್ಕೆ ಅವರು ಇಲ್ಲದ ವೇಳೆಯಲ್ಲಿ ಯಾರಿಗೂ ಹೇಳದೆ ಹೊರಟುಹೋದರಂತೆ.

ಎರಡನೆಯವನು—ಮತ್ತೆ ರಾಮಾನುಜರು !

ಮೊದಲನೆಯವನು—ಅವರು ಆ ದಿನ ಗುರುಗಳಿಗೆ ಅರ್ಪಿಸಬೇಕೆಂದು ಹಣ್ಣು, ಕಾಯಿ, ಎಲ್ಲಾ ತಂದಿದ್ದರಂತೆ ಏಕೆಂದರೆ ಆ ದಿನ ಅವರು ಕಲಿಯುತ್ತಿದ್ದ ಪ್ರಬಂಧಕ್ಕೆ ಮಂಗಳವಂತೆ.

ಎರಡನೆಯವನು—ಆಹಾ ! ಎಂಥಾ ಅನ್ಯಾಯವಾಯಿತು ! ಆಗ ಏನು ಮಾಡಿದರು ?

ಮೊದಲನೆಯವನು—ಅವರು ಬಹಳ ದುಃಖಿತರಾಗಿ ದೇವಸ್ಥಾನಕ್ಕೆ ಹೋದರಂತೆ ತಮ್ಮ ಗುರುಗಳಿಗೆ ಸಮರ್ಪಿಸಲು ತಂದಿದ್ದ ಹಣ್ಣು ಕಾಯನ್ನು ವರದರಾಜನಿಗೆ ಸಲ್ಲಿಸಿ ಅಲ್ಲೇ ಕೂತಿದ್ದಾರೆ.

ಎರಡನೆಯವನು—ಅಯ್ಯೋ, ಪಾಪ ! ಎಷ್ಟು ದುಃಖಿಸುತ್ತಿರುವರೋ ! ಬನ್ನಿ ನಾವು ಅಲ್ಲೇ ಹೋಗೋಣ

(ಇಬ್ಬರೂ ಹೋಗುವರು)

(ತೆರೆ ಬೀಳುವುದು)

## ದೃಶ್ಯ—೪

[ದೇವಸ್ಥಾನದಿಂದ ರಾಮಾನುಜರು ಬರುತ್ತಿರುವರು ಎದುರಿಗೆ ಒಬ್ಬ ಬಡ ಬ್ರಾಹ್ಮಣ ಬರುವರು.]

ರಾಮಾನುಜ—(ನಮಸ್ಕರಿಸಿ) ಸ್ವಾಮಿ ತಾವು ಏಕೆ ಹೀಗಿದ್ದೀರಿ ತಮ್ಮನ್ನು ನೋಡಿದರೆ ಬಹಳ ಹಸಿದಂತೆ ಕಾಣುತ್ತೆ ಬನ್ನಿ ಮನೆಗೆ ಹೋಗೋಣ

ಬ್ರಾಹ್ಮಣ—ತಾವು ಅತ್ಯಂತದಾನಿಗಳೆಂದೂ, ಬ್ರಾಹ್ಮಣಾರಾಧಕರೆಂದೂ ಅರಿತೇ ತಮ್ಮ ಮನೆಗೇ ಹೋಗಿ ಬಿಕ್ಷೆ ಬೇಡಿದೆ.

ರಾಮಾನುಜ—ಏನಾಯಿತು ? ಬಿಕ್ಷೆ ದೊರಕಲಿಲ್ಲವೇ ?

ಬ್ರಾಹ್ಮಣ—ತಮ್ಮ ಪತ್ನಿಯವರು, ಏನು ಕೆಲಸವಾಗಿದ್ದರೋ ಬಿಕ್ಷೆ ನೀಡಲಿಲ್ಲ.

ರಾಮಾನುಜ—ಏನೋ ಕಾರ್ಯ ಗೌರವದಲ್ಲಿ ನಿರತರಾಗಿರಬಹುದು ಬನ್ನಿ ಸ್ವಾಮಿ ನನ್ನ ಜೊತೆ

ಬ್ರಾಹ್ಮಣ—ನಾನು ಬರಲಾರೆ ನಿಮ್ಮ ಮಡದಿ ಬಹಳ ಆಚಾರವಂತರು ನಮ್ಮ ಬಳಿ ಬಂದರೇನೇ ಮೈಲಿಗೆ ಎಂದಣಿಸುತ್ತಾರೆ

ರಾಮಾನುಜ—(ತನಗೆತಾನೆ) ಅಯ್ಯೋ! ಮಹಾಪರಾಧವಾಯಿತಲ್ಲಾ! ಹಸಿದ ಬ್ರಾಹ್ಮಣರಿಗೆ ಅನ್ನ ನೀಡದ ಪಾಪ ಬಂತಲ್ಲಾ ! (ಜೋರಾಗಿ) ಬನ್ನಿ ಸ್ವಾಮಿ ನನ್ನ ಜೊತೆ ಆ ಅಂಗಡಿಗೆ ಬನ್ನಿ (ಇಬ್ಬರೂ ಅಂಗಡಿಯ ಬಳಿ ಬರುವರು. ರಾಮಾನುಜರು ಹಣ್ಣು, ಕಾಯಿ, ವಿಳ್ಳೇದೆಲೆ ಎಲ್ಲಾ ತೆಗೆದುಕೊಂಡು ಬ್ರಾಹ್ಮಣರ ಕೈಗೆ ಕೊಟ್ಟು) ಸ್ವಾಮಿ ಇದನ್ನು ನಮ್ಮ ಮನೆಯವರಿಗೆ ಕೊಡಿ ಅವರು ನಿಮಗೆ ಊಟ ಹಾಕುತ್ತಾರೆ.

ಬ್ರಾಹ್ಮಣ—ಇದನ್ನು ಯಾಕೆ ಸ್ವಾಮಿ ಕೊಡಬೇಕು ? ಅವರು ಏನಾದರೂ ತಿಳಿದು ಕೊಂಡಾರು !

ರಾಮಾನುಜ—ಇದನ್ನು ನಮ್ಮ ಮಾವನವರು ಕೊಟ್ಟು ಕಳುಹಿಸಿದರೆಂದು ಹೇಳಿ ಈ ಪತ್ರವನ್ನು ಕೊಡಿ ಆಗ ನಿಮಗೆ ಒಳ್ಳೆಯ ಔತಣ ಮಾಡಿಸುವರು.

(ರಾಮಾನುಜರು ಒಂದು ಪತ್ರ ಬರೆದು ಅವರ ಮಾವನವರು ರುಜು ಮಾಡಿದ ಹಾಗೆ ಮಾಡಿಕೊಡುವರು )

ಬ್ರಾಹ್ಮಣ—ಗುರುಗಳೇ ತಮಗೆ ನಮಸ್ಕಾರ ನಾನಿನ್ನು ಬರುವೆನು ಎಂದು ಹೋಗುವರು )

ರಾಮಾನುಜ—(ತನಗೆತಾನೆ) ರಕ್ಷಕಾಂಬಾಳನ್ನು ತಂದೆಯ ಮನೆಗೆ ಕಳುಹಿಸಲು ಇದೇ ಸರಿಯಾದ ಯೋಜನೆ (ಎಂದು ಹೇಳಿ ಆ ಬ್ರಾಹ್ಮಣನು ಹೋದ ದಿಕ್ಕನ್ನೇ ನೋಡುತ್ತಾ ನಿಲ್ಲುವರು

(ತೆರೆ ಬೀಳುವುದು)

## ದೃಶ್ಯ ೪

[ರಾಮಾನುಜರು ಯೋಚಿಸುತ್ತಾ ನಿಂತಿರುವರು ]

ರಾಮಾನುಜ—(ತನಗೆತಾನೆ) ಭಗವಾನ್ ವರದರಾಜರವರು ಕಾಂಚೀಪೂರ್ಣರ ಮೂಲಕ ಸಂದೇಶಗಳನ್ನು ಕಳುಹಿಸಿದರು ಆದರೆ ಒಂದೂ ಪೂರ್ಣ ಮಾಡಲಿಲ್ಲವಲ್ಲಾ ! ಮಹಾಪೂರ್ಣರಲ್ಲಿ ಅಧ್ಯಯನವೂ ಅರ್ಧಕ್ಕೇ ನಿಂತಿತು ನಾನು ಯಾವಾಗ ಆಳವಂದಾರವರಲ್ಲಿ ಮಾಡಿದ ಪ್ರತಿಜ್ಞೆ ಯನ್ನು ಪೂರೈಸುವುದು ? (ಎಂದು ಕಣ್ಣುಮುಚ್ಚಿ ನಿಲ್ಲುವರು. ಒಬ್ಬ ತೇಜಪುಂಜದಿಂದ ಕೂಡಿದ ಬ್ರಾಹ್ಮಣರು ಪ್ರವೇಶಿಸುವರು. ರಾಮಾನುಜರನ್ನು ನೋಡಿ )

ಬ್ರಾಹ್ಮಣ—ಇದೇನು ರಾಮಾನುಜ, ಹೀಗೆ ಚಿಂತಾಮಗ್ನನಾಗಿರುವೆ

ರಾಮಾನುಜ—(ಕಣ್ತೆರೆದು) ಓಹೋ ರಾಘವ ! ನಮಸ್ಕಾರ ಯಾವಾಗ ಬಂದಿರಿ ?

ರಾಘವ—ಇದೇ ಬಂದೆ ನೀವು ಏಕೆ ಹೀಗಿರುವಿರಿ ?

ರಾಮಾನುಜ—ಏನು ಮಾಡಲಿ ರಾಘವ ! ನನಗೆ ಯಾವಾಗಲೂ ಆಳವಂದಾರರ ಧ್ಯಾನವೇ ಆಗಿದೆ

ರಾಘವ—ಏಕೆ ?

ರಾಮಾನುಜ—ನಾನು ಅವರು ಪರಂಧಾಮಕ್ಕೆ ತೆರಳುವ ಕಾಲದಲ್ಲಿ ಅವರಿಗೆ ಮೂರು ಪ್ರತಿಜ್ಞೆಯನ್ನು ಮಾಡಿದ್ದೆ. ಇದುವರೆಗೂ ಏನೂ ನಡೆಸಲಾಗಲಿಲ್ಲ

ರಾಘವ—ಏಕೆ ?

ರಾಮಾನುಜ—ಏಕೆಂದರೆ ನಾನು ಸಂಸಾರಿ. ನನಗೆ ಗೃಹಕೃತ್ಯಗಳಿರುವುದಲ್ಲಾ ಪತ್ನಿಯ ಪಾಲನೆ ಮೊದಲಾದ ಕರ್ತವ್ಯವಿರುವುದಲ್ಲಾ !

ರಾಘವ—ಪತ್ನಿಯವರಿದ್ದರೇನು ? ಇದುವರೆಗೂ ನೀವು ಇಷ್ಟೊಂದು ಅಧ್ಯಯನ ನಡೆಸಲಿಲ್ಲವೇ ?

ರಾಮಾನುಜ—ಅಧ್ಯಯನ ಒಂದುಕಡೆ ಕೂತು ಮಾಡುವ ಕೆಲಸ ಆದರೆ ಅದರ ಪ್ರಚಾರ ಹಾಗಲ್ಲಾ

ರಾಘವ—ಮತ್ತೆ ಹೇಗೆ ?

ರಾಮಾನುಜ—ಊರೂರು ಸುತ್ತಬೇಕು. ಸದಾ ಭಗವಧ್ಯಾನದಲ್ಲಿರಬೇಕು. ಮತ್ಯಾವ ಚಿಂತೆನೆಯೂ ಇರಬಾರದು.

ರಾಘವ—ಹಾಗಾದರೆ ನೀವು ಏಕೆ ಸನ್ಯಾಸ ತೆಗೆದುಕೊಳ್ಳಬಾರದು

ರಾಮಾನುಜ—ಸನ್ಯಾಸ ತೆಗೆದುಕೊಳ್ಳಬೇಕಾದರೆ ಪತ್ನಿಯನ್ನು ತ್ಯಾಗ ಮಾಡಬೇಕಲ್ಲವೇ? ಅವರು ಒಪ್ಪುವರೇ ?

ರಾಘವ—ಅವರು ಒಪ್ಪುವರೋ ಬಿಡುವರೋ ಲೋಕಕಲ್ಯಾಣಕ್ಕಾಗಿ ನೀವು ಪತ್ನಿಯ ತ್ಯಾಗ ಮಾಡಲೇಬೇಕು.

ರಾಮಾನುಜ—(ರಾಮಾನುಜ ಒಂದು ನಿಮಿಷ ಕಣ್ಣುಮುಚ್ಚಿ ಯೋಚಿಸುವರು ರಾಘವ, ಆಶೀರ್ವಾದಮಾಡಿ ಅದೃಶ್ಯರಾಗುವರು. ರಾಮಾನುಜ ಕಣ್ತೆರೆಯುವರು ಅಲ್ಲಿ ರಾಘವನನ್ನು ಕಾಣದೆ) ರಾಘವ ಎಲ್ಲಿ ಹೋದಿರಿ! ಎಲ್ಲಿ ಹೋದರಿ ? ಆಹಾ ಭಗವಂತ ವರದರಾಜ ನಾನು ಇಂದೇ ಸನ್ಯಾಸ ತೆಗೆದುಕೊಳ್ಳುವೆನು. ಲೋಕಕಲ್ಯಾಣ ಮಾಡುವೆನು. ಎಂದು ವೇಗವಾಗಿ ಧಾವಿಸುವರು.

ಅದೃಶ್ಯವಾಣಿ—ರಾಮಾನುಜ, ರಾಮಾನುಜ !

ರಾಮಾನುಜ—ಅದ್ಯಾರು ನನ್ನ ಕರೆಯುತ್ತಿರುವರು ?

ಅದೃಶ್ಯವಾಣಿ—ರಾಮಾನುಜಾ, ನೀನು ಸನ್ಯಾಸ ತೆಗೆದುಕೊಳ್ಳಲೇಬೇಕು- ಲೋಕ ಕಲ್ಯಾಣ ಮಾಡಲೇಬೇಕು ಬೇಗ ಸನ್ಯಾಸ ತೆಗೆದುಕೊ.

ರಾಮಾನುಜ—ಭಗವಂತಾ ! ವರದರಾಜ ನೀನೆ ರಾಘವನ ರೂಪದಲ್ಲಿ ಬಂದು ಸಂದೇಶ ಎತ್ತೆಯಾ ? ನಿನ್ನ ಆಜ್ಞೆಯನ್ನು ಇಂದೇ ಪಾಲಿಸುವೆನು.

(ರಾಮಾನುಜರು ತೆರಳುವರು)

(ತೆರೆಬೀಳುವುದು)

## ದೃಶ್ಯ—೫

[ರಾಮಾನುಜರ ಮನೆ—ಬ್ರಾಹ್ಮಣನು ತೇಗುತ್ತಾ ಬರುವನು. ಹೊರಗಡೆಯಿಂದ ರಾಮಾನುಜರು ಬರುವರು.]

ರಾಮಾನುಜ—(ಬ್ರಾಹ್ಮಣರನ್ನು ನೋಡಿ) ಸ್ವಾಮೀ ತಮಗೆ ಬಿಕ್ಷೆಯು ಸುದಿತೆ ?

ಬ್ರಾಹ್ಮಣ—ಗುರುಗಳೇ ನಾನು ಧನ್ಯ. ಪುಷ್ಕಳವಾದ ಭೋಜನವಾಯಿತು. ರಕ್ಷಕಾಂಬಾಳ್ ಒಳಗಿಂದ ಬಂದು)

ರಕ್ಷಕಾಂಬಾಳ್—ಈತ ನಮ್ಮ ಊರಿನವರಂತೆ ನಮ್ಮ ತಂದೆ ಹಣ್ಣು, ಹೂವು ಮೊದಲಾದುವನ್ನು ಕೊಟ್ಟು, ಈ ಕಾಗದವನ್ನು ಕೊಟ್ಟು ಕಳುಹಿಸಿರುವರು.
(ಕಾಗದ ಕೊಡುವಳು)

ರಾಮಾನುಜ—(ಓದುವರು)

ನನ್ನ ಪ್ರೀತಿಯ ಅಳಿಯಂದಿರೆ,

ನಮ್ಮ ಚಿಕ್ಕ ಮಗಳಿಗೆ ಇನ್ನು ಒಂದು ವಾರದಲ್ಲಿ ಮದುವೆಯಾಗಲಿದೆ. ತಮ್ಮ ಅತ್ತೆಯವರೊಬ್ಬರಿಗೇ ಎಲ್ಲಾ ಕೆಲಸವನ್ನು ಮಾಡಲಾಗದಿರುವುದರಿಂದ ಈ ಪತ್ರ ತರುವ ಬ್ರಾಹ್ಮಣನ ಜೊತೆ ರಕ್ಷಕಾಂಬಾಳನ್ನು ಕಳುಹಿಸತಕ್ಕದ್ದು ಮತ್ತೆ ತಾವ ಸಕಾಲಕ್ಕೆ ದಯಮಾಡಿಸಿ ವಧೂವರರನ್ನು ಆಶೀರ್ವದಿಸತಕ್ಕದ್ದು

ಇಂತಿ ಆಶೀರ್ವಾದಗಳು
ತಮ್ಮ ಮಾವನವರು

ರಕ್ಷಕಾಂಬಾ, ಈಗ ಏನು ಮಾಡುವೆ ?

ರಕ್ಷ—ತಾವು ಅನುಮತಿಸಿದರೆ ನಾನು ಹೋಗುವೆ.

ರಾಮಾನುಜ—ಯಾರ ಜೊತೆ ಹೋಗುವೆ ನನಗೆ ಬರಲಾಗುವುದಿಲ್ಲವಲ್ಲಾ ?

ರಕ್ಷ—ನಮ್ಮ ತಂದೆಯವರು ಹೇಳಿದಂತೆ ಈ ಬ್ರಾಹ್ಮಣರ ಜೊತೆ ಹೋಗಲೇ ?

ರಾಮಾನುಜ—ಹಾಗೇ ಆಗಲಿ, ಹೋಗಿ ಬಾ

ರಕ್ಷ—ನಾನು ಹೋಗಲೆ ? ತಾವು ಯಾವಾಗ ಬರುವಿರಿ ?

ರಾಮಾನುಜ—ನಾನು ಮದುವೆಯ ವೇಳೆಗೆ ಬರುವೆನು ಈ ಬ್ರಾಹ್ಮಣರು ನಿನ್ನನ್ನು ಕರೆದುಕೊಂಡು ಹೋಗುವರು. ಬ್ರಾಹ್ಮಣೋತ್ತಮರೆ ಇವರನ್ನು ಅವರ ತಂದೆಯ ಮನೆಗೆ ತಲಪಿಸಿಬಿಡಿ

ಬ್ರಾಹ್ಮಣರು—ಆಗಲಿ (ಬ್ರಾಹ್ಮಣರು ರಕ್ಷಕಾಂಬಾಳ್ ಇಬ್ಬರೂ ಹೋಗುವರು)

ರಾಮಾನುಜ—ಸಧ್ಯ ಒಂದು ದೊಡ್ಡ ಕಾರ್ಯವನ್ನು ಮಾಡಿದೆ ಈಗಲೇ ಸರಿಯಾದ ಸಮಯ ರಕ್ಷಕಾಂಬಾಳ್ ತಂದೆಯ ಮನೆಗೆ ಹೋಗಿರುವರು, ನಾನು ಈಗಲೇ ಸ್ವಾಮಿ ಸನ್ನಿಧಿಗೆ ಹೋಗಿ ಅವನ ಅನುಜ್ಞೆ ಪಡೆದು ಸನ್ಯಾಸ ಸ್ವೀಕಾರಮಾಡಿ ಲೋಕಕಲ್ಯಾಣ ಮಾಡುವೆ, (ರಾಮಾನುಜರು ತೆರಳುವರು)

(ತೆರೆಬೀಳುವುದು)

## ದೃಶ್ಯ—೬

[ಇಬ್ಬರು ಸ್ತ್ರೀಯರು ಸೊಂಟದಲ್ಲಿ ಬಿಂದಿಗೆ ಇಟ್ಟುಕೊಂಡು, ಮಾತಾಡುತ್ತಾ ಬರುವರು ]

ಸೌಮ್ಯನಾಯಕಿ—ಕೇಳಿದಿರಾ ವೈದೇಹಿ! ಶ್ರೀ ರಾಮಾನುಜರು ಸನ್ಯಾಸ ಸ್ವೀಕರಿಸಿದರಂತೆ.

ವೈದೇಹಿ—ಹೌದು ಸೌಮ್ಯ! ನನಗೂ ಇದೇ ಸಮಾಚಾರ ತಿಳಿಯಿತು. ಆದರೂ ನಂಬಿಕೆ ಇರಲಿಲ್ಲ.

ಸೌಮ್ಯ—ನಾನೇ ಕಣ್ಣಾರೆ ನೋಡಿ ಬಂದೆ.

ವೈದೇಹಿ—ಪಾಪ! ರಕ್ಷಕಾಂಬಾಳ್ ಎಷ್ಟು ಸುಂದರಿ, ಎಂತಹ ಸದ್ಗುಣ ಸಂಪನ್ನೆ, ಅವಳ ಮುಂದಿನ ಜೀವನ ಹೇಗೆ?

ಸೌಮ್ಯ—ಆದರೆ ಏನು ಮಾಡುವುದು! ರಾಮಾನುಜರು ವಚನ ಬದ್ಧರಾಗಿದ್ದರು. ಗುರುಗಳಿಗಿತ್ತ ವಚನ ಪಾಲಿಸಬೇಕಾಗಿತ್ತಂತೆ, ಅವರಿಬ್ಬರಲ್ಲೂ ಅಷ್ಟು ಒಮ್ಮತ ವಿರಲಿಲ್ಲ ಎಂದು ಕೇಳಿದೆ.

ವೈದೇಹಿ—ಅವರಿಬ್ಬರಲ್ಲೂ ಒಮ್ಮತವೇನೋ ಇತ್ತು. ಆದರೆ ರಾಮಾನುಜರು ವಿರಾಗಿ.

ಸೌಮ್ಯ—ಅಷ್ಟೇ ಅಲ್ಲ, ರಾಮಾನುಜರ ಗುರುಪತ್ನಿಗೂ ರಕ್ಷಕಾಂಬಾಳಿಗೂ ವಾದ ವಿವಾದ ಬೆಳೆದು ಅವರು ಹೋದರಂತೆ. ಹೀಗೆ ಹೋದರಲ್ಲಾ ಅಂತ ರಾಮಾನುಜರಿಗೆ ಬಹಳ ದುಃಖ ಉಂಟಾಗಿ ಸನ್ಯಾಸ ಸ್ವೀಕರಿಸಿದರಂತೆ.

ವೈದೇಹಿ—ಪಾಪ! ರಕ್ಷಕಾಂಬಾಳ ಜೊತೆ ವಾದಮಾಡಿ ಅವರು ಹೋದರೆ ಇವಳದೇನು ತಪ್ಪು ಇಷ್ಟಕ್ಕೆಲ್ಲಾ ರಾಮಾನುಜರಂತಹ ಮೇಧಾವಿ ಸನ್ಯಾಸ ಸ್ವೀಕರಿಸು ವರೆ? ಮತ್ತೇನೋ ಕಾರಣವಿರಬೇಕು.

ಸೌಮ್ಯ—ಅಯ್ಯೋ ಏನಾದರಾಗಲಿ ಬಿಡು, ಏನ್ಮಾಡೋದು ರಕ್ಷಕಾಂಬಾಳ ಹಣೇಬರಹ, ಬಾ ಬೇಗ ಬಾ ನೀರು ತೆಗೆದುಕೊಂಡು ಹೋಗೋಣ. ಅತ್ತೆಯವರು ದಾರಿ ನೋಡುತ್ತಿರುತ್ತಾರೆ..

(ಇಬ್ಬರೂ ಹೋಗುವರು ಮತ್ತೊಂದು ಕಡೆಯಿಂದ ಇಬ್ಬರು ಬ್ರಾಹ್ಮಣರು ಬರುವರು)

ಪುಂಡರೀಕ—ಕೇಳಿದಿರಾ ರಘೋತ್ತಮರೇ! ರಾಮಾನುಜರು ಸನ್ಯಾಸ ದೀಕ್ಷೆ ಪಡೆದರಂತೆ.

ರಘೋತ್ತಮ—ಪುಂಡರೀಕರೆ! ನಾನೂ ಕೇಳಿದೆ. ಮತ್ತೆ ಅವರ ಮಠಕ್ಕೆ ಹೋಗಿ ಉಪದೇಶವನ್ನು ಪಡೆದೆ.

ಪುಂಡರೀಕ—ಅವರು ಈಗ ಹೇಗಿದ್ದಾರೆ?

ರಘೋತ್ತಮ—ಕಾಷಾಯ ವಸ್ತ್ರವನ್ನು ಧರಿಸಿದ ಆ ಮಹಾನುಭಾವರಲ್ಲಿ ಏನು ತೇಜಸ್ಸು! ಊರ್ಧ್ವಪುಂಡ್ರವನ್ನು ಧರಿಸಿದ ಅವರ ವರ್ಚಸ್ಸು, ಕಣ್ಗಳಕಾಂತಿ, ಆ ವಿಶಾಲವಾದ ಕಣ್ಗಳ ನೋಟ! ಅಹಾ! ಎಂಥಹ ವರನ್ನಾದರೂ ತಮ್ಮ ಕಡೆ ಸೆಳೆಯುತ್ತದೆ.

ಪುಂಡರೀಕ—ಅಹಾ! ಹಾಗಾದರೆ ನಾನು ಹೋಗಿ ಅವರ ದರ್ಶನ ಲಾಭ ಪಡೆಯುವೆನು

ರಘೋತ್ತಮ—ದರ್ಶನ ಲಾಭವೇನು? ಅಲ್ಲಿ ಹೋದವರೆಲ್ಲಾ ಅವರ ಶಿಷ್ಯರೆ, ಎಂತೆಂತಹ ಮಹಾನುಭಾವರೆಲ್ಲಾ ಅವರ ಶಿಷ್ಯ ಕೋಟಿಯಲ್ಲಿ ಸೇರಿದ್ದಾರೆ ನಿಮಗೆ ಗೊತ್ತಾ !

ಪುಂಡರೀಕ—ಯಾರು, ಯಾರು ? ಸ್ವಲ್ಪ ತಿಳಿಸ್ತೀರಾ ?

ರಘೋತ್ತಮ—ಅತ್ಯಂತ ಮೇಧಾವಿಗಳೂ, ಪ್ರಕಾಂಡ ಪಂಡಿತರೂ ಆದ ದಾಶರಥಿಗಳು ಅವರ ಮೊದಲನೇ ಶಿಷ್ಯರಾದರು ಇವರು ವೇದ ವೇದಾಂತಗಳಲ್ಲಿ ನುರಿತವರು ಮಹಾವಿಷ್ಣು ಭಕ್ತರು

ಪುಂಡರೀಕ—ಮತ್ಯಾರು ?

ರಘೋತ್ತಮ—ಇವರ ನಂತರ ಹಾರೀತ ಗೋತ್ರದಲ್ಲಿ ಹುಟ್ಟಿದ ವಿಶಾಲಹೃದಯಿಗಳಾದ ಕೂರನಾಥ ಅಥವಾ ಕೂರತ್ತಾಳ್ವಾರು ಎರಡನೇ ಶಿಷ್ಯರಾಗಿ ದೀಕ್ಷೆ ಪಡೆದರು

ಪುಂಡರೀಕ—ಇವರೇನೋ ಏಕಸಂಧಿಗ್ರಾಹಿಗಳು ಮತ್ತೆ ಒಳ್ಳೆ ಜ್ಞಾಪಕಶಕ್ತಿಯುಳ್ಳವರು ಎಂದು ಕೇಳಿವೆ

ರಘೋತ್ತಮ—ಅಷ್ಟೇ ಅಲ್ಲ, ಶ್ರೀ ವೈಷ್ಣವ ಭಕ್ತಿ ಸಿದ್ಧಾಂತವನ್ನು ಮತ್ತು ಶಂಖ, ಚಕ್ರ, ಊರ್ಧ್ವಪುಂಡ್ರದ ಮಹಿಮೆಯನ್ನೂ ಚೆನ್ನಾಗಿ ಅರಿತವರಂತೆ

ಪುಂಡರೀಕ—ರಾಮಾನುಜರ ಗುರುಗಳಾದ ಯಾದವಪ್ರಕಾಶರು ?

ರಘೋತ್ತಮ—ಅದು ಏನು ಹೇಳಲಿ ? ಯಾದವಪ್ರಕಾಶರ ತಾಯಿ ಕಾಂಚೀಪೂರ್ಣರು, ವರದರಾಜಸ್ವಾಮಿಗಳು, ಯಾರ್ಯಾರು ಸಂದೇಶ ನೀಡಿದರೂ ಯಾದವರಿಗೆ ನಂಬಿಕೆಯೇ ಬರಲಿಲ್ಲ

ಪುಂಡರೀಕ—ಮತ್ತೆ ಹೇಗೆ ಶಿಷ್ಯರಾದರು ?

ರಘೋತ್ತಮ—ಯಾದವರು ರಾಮಾನುಜರನ್ನು ಪರೀಕ್ಷಿಸಲು ಅವರ ಬಳಿ ಹೋದರು.

ಪುಂಡರೀಕ—ಆಗ ರಾಮಾನುಜರು ಏನು ಮಾಡಿದರು ?

ರಘೋತ್ತಮ—ರಾಮಾನುಜರು ಆಗ ತಮ್ಮ ಪಟ್ಟ ಶಿಷ್ಯರುಗಳಾದ ಕೂರೇಶ ಮತ್ತು ದಾಶರಥಿಗಳ ಜೊತೆ ಆಸೀನರಾಗಿದ್ದರು ತಮ್ಮ ಗುರುಗಳಾದ ಯಾದವಪ್ರಕಾಶರನ್ನು ನೋಡಿದ ಕೂಡಲೇ ಪೀಠದಿಂದ ಎದ್ದು ಅವರಿಗೆ ನಮಸ್ಕರಿಸಿ ಸ್ವಾಗತಿಸಿ ಅರ್ಘ್ಯಪಾದ್ಯಗಳನ್ನು ಇತ್ತು ಸತ್ಕರಿಸಿದರಂತೆ

ಪುಂಡರೀಕ—ಯಾದವರು ರಾಮಾನುಜರನ್ನು ಹೇಗೆ ಪರೀಕ್ಷಿಸಿದರು ?

ರಘೋತ್ತಮ—ರಾಮಾನುಜರ ತೇಜಸ್ಸಿನಿಂದ ಕೂಡಿದ ಲಲಾಟವನ್ನು ನೋಡೇ ಅವರಿಗೆ ಮಣಿದರು ಆದರೂ ಊರ್ಧ್ವಪುಂಡ್ರ. ಶಂಖ, ಚಕ್ರ ಇವುಗಳ

ಅಂತರಾರ್ಥವನ್ನು ಶಾಸ್ತ್ರಾಧಾರದ ಮೂಲಕ ವ್ಯಾಖ್ಯಾನಮಾಡಲು ಕೇಳಿದರಂತೆ.

ಪುಂಡರೀಕ—ರಾಮಾನುಜರೇ ನಿರೂಪಿಸಿದರೆ ?

ರಘೋತ್ತಮ—ಇಲ್ಲೇ ರಾಮಾನುಜರ ಹಿರಿಮೆ ಎದ್ದು ಕಾಣುವುದು. ಯಾದವರು ತಮ್ಮನ್ನು ನಿಂದಿಸಿದಂತಲ್ಲ, ಅವರು ನಮಸ್ಕರಿಸಿ ನನ್ನ ಶಿಷ್ಯರಾದ ಈ ಕೂರೇಶರಲ್ಲಿ ಎಲ್ಲಾ ಶಾಸ್ತ್ರಗಳೂ ಕರತಲಾಮಲಕವಾಗಿದೆ. ಅವುಗಳ ಅಂತರಾರ್ಥವನ್ನೂ ಬಲ್ಲವರು ಇವರು ತಮ್ಮ ಸಂದೇಹವನ್ನು ಹೋಗಲಾಡಿಸುತ್ತಾರೆ. ಎಂದು ಹೇಳಿ ಕೂರೇಶರಿಗೆ ಅನುಮತಿ ನೀಡಿದರಂತೆ.

ಪುಂಡರೀಕ—ಆಹಾ ! ರಾಮಾನುಜರು ಪಂಡಿತೋತ್ತಮರಿಗೆ ಎಷ್ಟು ಗೌರವ ನೀಡುತ್ತಾರೆ. ಶಿಷ್ಯರ ಹಿರಿಮೆಗೆ ಎಷ್ಟು ಗೌರವ ತೋರಿಸುತ್ತಾರೆ.

ರಘೋತ್ತಮ—ಯಾದವರು ಕೂರೇಶರ ವಾಗ್ಝರಿಯನ್ನು ಶಾಸ್ತ್ರಾರ್ಥಗಳ ಹಾಗೂ ಶ್ರುತಿ, ಸ್ಮೃತಿಗಳ ಪ್ರವಾಹವನ್ನು ಕಂಡು ಮೂಕರಾದರು.

ಪುಂಡರೀಕ—ಈಗಲಾದರೂ ರಾಮಾನುಜರ ಪ್ರಭಾವ ತಿಳಿಯಿತೆ ?

ರಘೋತ್ತಮ—ತಿಳಿಯಿತು ಮಾತ್ರವಲ್ಲ, ತನ್ನ ತಪ್ಪಿಗಾಗಿ ಪರಿತಪಿಸುತ್ತಾ, ವಿಲಪಿಸುತ್ತಾ ತನ್ನನ್ನು ಸಂಸಾರಪಾಶದಿಂದ ಬಿಡಿಸಬೇಕೆಂದು ಅವರನ್ನು ಬಹಳವಾಗಿ ಬೇಡಿದರಂತೆ.

ಪುಂಡರೀಕ—ಆಗ ರಾಮಾನುಜರು ಏನು ಮಾಡಿದರು ?

ರಘೋತ್ತಮ—ರಾಮಾನುಜರು ದಯಾದ್ರಹೃದಯದಿಂದ ಅವರನ್ನು ಆಲಂಗಿಸಿ, ಶ್ರೀ ವೈಷ್ಣವ ರೀತ್ಯಾ ದೀಕ್ಷೆಯನ್ನು ಕೊಡಿಸಿ. "ಗೋವಿಂದ ಜೀಯರ್," ಎಂದು ಕರೆದರು ಮತ್ತು ಅವರನ್ನು 'ಶ್ರೀ ವೈಷ್ಣವ ಸಿದ್ಧಾಂತ' ಮತ್ತು 'ಯತಿಧರ್ಮ'ದ ಬಗ್ಗೆ ಪುಸ್ತಕವನ್ನು ಬರೆಯಲು ವಿನಂತಿಸಿಕೊಂಡರು.

ಪುಂಡರೀಕ—ಇಷ್ಟೆಲ್ಲಾ ಶಿಷ್ಯರಾದರಲ್ಲಾ. ರಾಮಾನುಜರು ತಮ್ಮ ಸಹೋದರರನ್ನು ಏಕೆ ಮರೆತರು ?

ರಘೋತ್ತಮ—ಮರೆತಿಲ್ಲ, ರಾಮಾನುಜರು ತನಗೆ ಜೀವದಾನ ಮಾಡಿದ ತಮ್ಮ ಸಹೋದರರನ್ನು ಎಂದಾದರೂ ಮರೆಯುವರೇ.

ಪುಂಡರೀಕ—ಮತ್ತೆ ಏಕೆ ಕರೆಸಲಿಲ್ಲ ?

ರಘೋತ್ತಮ—ಅವರು ಶೈವಭಕ್ತರಾಗಿದ್ದಾರೆ ಶಿವನಿಂದ ಅವರ ಮನಸ್ಸನ್ನು ವಿಷ್ಣುವಿನ ಕಡೆಗೆ ತಿರುಗಿಸುವುದು ಅಷ್ಟು ಸುಲಭವಲ್ಲವಲ್ಲಾ ?

ಪುಂಡರೀಕ—ರಾಮಾನುಜನ ಸಹೋದರರೇ ಶ್ರೀ ವೈಷ್ಣವ ದೀಕ್ಷೆ ವಹಿಸದಿದ್ದರೆ ?

ರಘೋತ್ತಮ—ಅದಕ್ಕಾಗಿ ರಾಮಾನುಜರು ಬಹಳ ಪರಿತಪಿಸುತ್ತಿದ್ದರು. ರಾಮಾನುಜರ

ಚಿಂತೆಯನ್ನು ಬಿಡಿಸಲು ಶ್ರೀ ಶ್ರೀ ಶೈಲಪೂರ್ಣರು ಗೋವಿಂದರ ಮನಸ್ಸನ್ನು ಬಹಳ ಕಷ್ಟಪಟ್ಟು ತಿರುಗಿಸಿ ಶ್ರೀ ವೈಷ್ಣವ ದೀಕ್ಷೆಯನ್ನು ಅನುಗ್ರಹಿಸಿ ರಾಮಾನುಜರ ಬಳಿ ಕರೆತಂದರಂತೆ

ಪುಂಡರೀಕ—ಹಾಗಾದರೆ ರಾಮಾನುಜರಿಗೆ ಬಹಳ ಸಂತೋಷವಾಗಿರಬಹುದಲ್ಲವೇ ?

ರಘೋತ್ತಮ—ತನ್ನ ತಮ್ಮನಾದ ಗೋವಿಂದರನ್ನು ಕಂಡ ತಕ್ಷಣ ಗಾಢಾಲಿಂಗನ ಮಾಡಿ ಕೊಂಡು ಅತ್ಯಂತ ಹರ್ಷಚಿತ್ತರಾದರಂತೆ

ಪುಂಡರೀಕ—ರಘೋತ್ತಮರೆ ಈ ದಿನ ನೀವು ರಾಮಾನುಜರ ಪ್ರಭಾವ ಮತ್ತು ಸಮಾನ ಧರ್ಮದ ಬಗ್ಗೆ ಅನೇಕ ವಿಚಾರಗಳನ್ನು ತಿಳಿಸಿದಿರಿ ನಾನು ಹೋಗಿ ಆ ಮಹಾನುಭಾವರ ದರ್ಶನ ಮಾಡುತ್ತೇನೆ (ಎಂದು ಹೋಗುವರು)

ರಘೋತ್ತಮ—ನಾನಿನ್ನು ದೇವರದರ್ಶನಕ್ಕೆ ಹೋಗುತ್ತೇನೆ

## ದೃಶ್ಯ—೭

[ಶ್ರೀರಂಗದಲ್ಲಿ ಯಾಮುನಾಚಾರ್ಯರ ಮಠ ರಾಮಾನುಜರು ಮತ್ತು ಮಹಾಪೂರ್ಣರು ಕುಳಿತಿರುವರು ರಾಮಾನುಜರು ಎದ್ದು ನಮಸ್ಕರಿಸಿ ]

ರಾಮಾನುಜ—ಗುರುಗಳೇ, ಶ್ರೀ ವರದರಾಜನ ಅಪ್ಪಣೆ ಪಡೆದು ಶ್ರೀರಂಗಕ್ಕೆ ಬಂದಾಯಿತು. ಶ್ರೀರಂಗನಾಥನ ದರ್ಶನ, ಆಶೀರ್ವಾದ ಮತ್ತು ವರವನ್ನು ಪಡೆದಾಯಿತು . ತಾವು ನನಗೆ ಕೆಲವು ವಿಚಾರಗಳನ್ನು ಅನುಗ್ರಹಿಸಿ ಕೃತಾರ್ಥನನ್ನಾಗಿ ಮಾಡಬೇಕು.

ಮಹಾಪೂರ್ಣ—ಯಾವ ವಿಷಯಗಳು ನಿಮಗೆ ಬೇಕು.

ರಾಮಾನುಜ—ನ್ಯಾಸತತ್ವ, ಗೀತಾರ್ಥಸಂಗ್ರಹ, ಸಿದ್ಧಿತ್ರಯ, ವ್ಯಾಸಸೂತ್ರ ಮತ್ತು ಪಾಂಚರಾತ್ರಾಗಮಗಳನ್ನು ನನಗೆ ವಿಷದವಾಗಿ ತಿಳಿಸುವಿರಾ ?

ಮಹಾಪೂರ್ಣ—ಆಗಲಿ, ರಾಮಾನುಜರೇ ಕಲಿಯುಗ ಧರ್ಮಪ್ರಚಾರಕ್ಕೆ ಹೆಚ್ಚು ಅನುಕೂಲಕರವಾದ ಪಾಂಚರಾತ್ರಾಗಮವನ್ನು ಸಂಕ್ಷಿಪ್ತವಾಗಿ ತಿಳಿಸಿ, ಮುಂದೆ ಬಾಕಿ ವಿಷಯಗಳನ್ನು ತಿಳಿಸುವೆನು.

ರಾಮಾನುಜ—ಆಗಲಿ ಗುರುಗಳೇ ಅದನ್ನೇ ಮೊದಲು ತಿಳಿಸಿ.

ಮಹಾಪೂರ್ಣ—ಕೇಳಿ ರಾಮಾನುಜರೆ.

ಆಗಮಂ ನಿಗಮಂ ಚೈವತಂತ್ರ ಶಾಸ್ತ್ರಂದ್ವಿದಾಮತಂ ।
ಮಹೇಶ್ವರೇಣ ಯತ್ಪ್ರೋಕ್ತಂ ಆಗಮಂ ತನ್ನಾಗದ್ಯತೇಃ ॥
ದೇವೀಪ್ರೋಕ್ತಂ ನಿಗಮಂ ತದ್ವಿದು ರ್ಬುದಾಃ ॥

ಶಾಸ್ತ್ರವು ಆಗಮ ಮತ್ತು ನಿಗಮವೆಂದು ಎರಡು ವಿಧವು. ಈಶ್ವರನಿಂದ

ಹೇಳಲ್ಪಟ್ಟಿದ್ದು ಆಗಮವೆಂದೂ ದೇವಿಯಿಂದ ಹೇಳಲ್ಪಟ್ಟಿದ್ದು ನಿಗಮವೆಂದೂ ಕರೆಯಲ್ಪಡುತ್ತದೆ.

ರಾಮಾನುಜ—ಈಶ್ವರನಿಂದ ಹೇಳಲ್ಪಟ್ಟಿದ್ದು ಆಗಮ, ದೇವಿಯಿಂದ ಹೇಳಿದ್ದು ನಿಗಮ ವೆಂದಲ್ಲವೆ ಗುರುಗಳೆ ?

ಮಹಾಪೂರ್ಣ—ಹೌದು ಮುಂದೆ ಕೇಳು ನಿಗಮವೆಂದರೆ ವೇದಗಳು. ಇತರ ಶಾಸ್ತ್ರ ಗಳಿಗೆ ಆಗಮವೆಂದು ಹೆಸರು. ಇವೆರಡೂ ತಂತ್ರ ಶಾಸ್ತ್ರದ ಭೇದ ಗಳು ಆದಕ್ಕೆ "ಆಗಮೋಹ್ಯಾಪ್ತ ವಚನಂ," ಎಂದೆನ್ನುತ್ತಾರೆ.

ರಾಮಾನುಜ—ನಿಗಮವೆಂದರೆ ವೇದಗಳು ಇತರ ಶಾಸ್ತ್ರಗಳಿಗೆ ಆಗಮ ಎಂದು, ಈ ಎರಡೂ ಶಾಸ್ತ್ರಗಳೂ ತಂತ್ರಗಳ ಭೇದಕ್ಕೆ ಸೇರಿದುವೆಂದು ಗೊತ್ತಾ ಯಿತು. ಆಗಮ ಎಂದರೆ ಏನು ಎಂದು ತಿಳಿಸುವಿರಾ ?

ಮಹಾಪೂರ್ಣ—ಆಗಮದ ವಿಚಾರದ ಈ ಶಬ್ದ ಕಲ್ಪದ್ರುಮದ ಈ ಶ್ಲೋಕವನ್ನು ಕೇಳಿ

ಸೃಷ್ಟಿಶ್ಚ ಪ್ರಲಯಂ ಚೈವ ದೇವತಾನಾಂತಥಾರ್ಚನಂ ।
ಸಾಧನಂ ಚೈವ ಮಂತ್ರಾಣಾಂ ಪುರಶ್ಚರಣಮೇವ ಚ ॥
ಷಟ್ಕರ್ಮ ಸಾಧನಂ ಚೈವ ಧ್ಯಾನಯೋಗ ಶ್ಚತುರ್ವಿಧಃ ।
ಸಪ್ತಭಿರ್ಲಕ್ಷಣೈರ್ಯುಕ್ತಂತ್ವಾಗಮಂತದ್ವಿದುರ್ಬುಧಾಃ ॥

ಸೃಷ್ಟಿ, ಪ್ರಳಯ ದೇವತಾರ್ಚನೆ, ಮಂತ್ರಸಾಧನೆ, ಮಂತ್ರಪುರಶ್ಚರಣೆ. ಷಟ್ಕರ್ಮ ಸಾಧನೆ, ಮತ್ತು ಧ್ಯಾನಯೋಗ, ಈ ಏಳು ವಿಷಯಗಳುಳ್ಳ ಶಾಸ್ತ್ರವು ಆಗಮ ಎಂದು ಹೇಳಲ್ಪಟ್ಟಿದೆ

ರಾಮಾನುಜ—ಆಗಮವೆಂದರೆ ಏನೆಂದು ಗೊತ್ತಾಯಿತು ಪಾಂಚರಾತ್ರ ಎಂದರೆ ಏನೆಂದು ತಿಳಿಸುವಿರಾ ?

ಮಹಾಪೂರ್ಣ—ಕೇಳಿ ರಾಮಾನುಜರೆ, ಸತ್ ಶಬ್ದವಾಚ್ಯನಾದ ಪರಬ್ರಹ್ಮನನ್ನು ಬೋಧಿಸುವ ಶಾಸ್ತ್ರಕ್ಕೆ 'ಸಾತ್ವತಶಾಸ್ತ್ರ ಎಂದು ಹೆಸರು.

ರಾಮಾನುಜ—ಸತ್ ಶಬ್ದವಾಚ್ಯನಾದ ಪರಬ್ರಹ್ಮನನ್ನು ಬೋಧಿಸುವ ಶಾಸ್ತ್ರಕ್ಕೆ ಸಾತ್ವತ ಶಾಸ್ತ್ರ ಎಂದು ತಿಳಿಯಿತು ಮತ್ತೆ ?

ಮಹಾಪೂರ್ಣ—ಈ ಶಾಸ್ತ್ರದ ಪ್ರಕಾರ ಮಹಾವಿಷ್ಣುವು ಪೂಜಿಸಲ್ಪಡುವನು. ಮಹಾ ವಿಷ್ಣುವಿನ ಪರಬ್ರಹ್ಮ ಸ್ವರೂಪವನ್ನು ಪ್ರತಿಪಾದಿಸಿ ಅವನ ವಿಷಯ ವಾಗಿ ತಿಳಿಸುವುದರಿಂದ ಈ ಶಾಸ್ತ್ರಕ್ಕೆ ವೈಷ್ಣವ ಶಾಸ್ತ್ರವೆಂದೂ ಹೆಸರು. ಇದನ್ನೇ ಪಂಚಮವೇದ, ಏಕಾಯನವೇದ, ಭಗವಚ್ಛಾಸ್ತ್ರ ಪಾಂಚ ರಾತ್ರವೇ ಮುಂತಾದ ಅನೇಕ ನಾಮಗಳಿಂದ ಕರೆಯುವರು.

ರಾಮಾನುಜ—ಪಾಂಚರಾತ್ರ ಎಂಬುದೇನೋ ಗೊತ್ತಾಯಿತು. ಆದರೆ ಅದಕ್ಕೆ ಆ ಹೆಸರು ಬರಲು ಕಾರಣವೇನು ?

ಮಹಾಪೂರ್ಣ—ಆ ಹೆಸರು ಬರಲು ಅನೇಕ ಕಾರಣಗಳುಂಟು ಇದಕ್ಕೆ ಅನೇಕ ಸಂಹಿತೆಗಳೂ ಪುರಾಣಗಳೂ ಆಧಾರವಾಗಿರುವುವು ಅವುಗಳಲ್ಲಿ ತಿಳಿಸಿರುವ ಕೆಲವನ್ನು ಮಾತ್ರ ಇಲ್ಲಿ ತಿಳಿಸುವೆನು.

ರಾಮಾನುಜ—ಆಗಲಿ ಗುರುಗಳೆ ಕೆಲವನ್ನೇ ಹೇಳಿ ಬಾಕಿಯನ್ನು ನಾನೇ ಓದಿಕೊಳ್ಳುವೆನು.

ಮಹಾಪೂರ್ಣ—ಈಶ್ವರ ಸಂಹಿತೆಯಯು ಪ್ರಕಾರ ಭಗವಂತನ ಪಂಚಾಯುಧ (ಚಕ್ರ ಶಂಖ, ಗದಾ, ಖಡ್ಗ ಚಾಪ)ಗಳ ಅಂಶದಿಂದ ಜನಿಸಿದ ಶಾಂಡಿಲ್ಯ, ಔಪಗಾಯನ ಮೌಂಜ್ಯಾಯನ, ಕೌಶಿಕ ಮತ್ತು ಭರದ್ವಾಜರೆಂಬ ಐವರು ಋಷಿಗಳಿಗೆ ಭಗವಂತನು ಈ ಶಾಸ್ತ್ರವನ್ನು ಒಬ್ಬೊಬ್ಬರಿಗೆ ಒಂದೊಂದು ದಿವಸ ಉಪದೇಶಿಸಿದ್ದರಂತೆ, ಆದ್ದರಿಂದ ಪಾಂಚರಾತ್ರ ವೆಂದು ಹೆಸರು

ರಾಮಾನುಜ—ಮತ್ತೆ ?

ಮಹಾಪೂರ್ಣ—ವಿಹಗೇಂದ್ರ ಸಂಹಿತೆಯಲ್ಲಿ ಅನಂತ, ಗರುಡ, ವಿಷ್ವಕ್ಸೇನ, ರುದ್ರ, ಬ್ರಹ್ಮ ಈ ಐವರು ಒಂದೊಂದು ರಾತ್ರಿಯಲ್ಲಿ ಒಬ್ಬೊಬ್ಬರು ಭಗವಂತ ನಿಂದ ಗ್ರಹಿಸಿದ್ದರಿಂದ ಪಾಂಚರಾತ್ರವೆಂದು ಹೆಸರು.

ರಾಮಾನುಜ—ರುದ್ರ, ಬ್ರಹ್ಮ, ಗರುಡ ಮೊದಲಾದವರು ಒಂದೊಂದು ರಾತ್ರಿಯಲ್ಲಿ ಕೇಳಿದ್ದರಿಂದ ಇದಕ್ಕೆ ಪಾಂಚರಾತ್ರವೆಂದು ಹೆಸರು ಬಂದಿತೆಂದರಿತೆವು

ಮಹಾಪೂರ್ಣ—ವಿಷ್ಣು ಸಂಹಿತೆಯ ಪ್ರಕಾರ ಶಬ್ದ ಸ್ಪರ್ಶ, ರೂಪರಸಗಂಧ ಈ ಐದಕ್ಕೆ ರಾತ್ರಿಗಳೆಂದು ಹೆಸರು. ಈ ಶಾಸ್ತ್ರವೆಂಬ ತೇಜಸ್ಸನ್ನು ಕಂಡು ಈ ಐದು ರಾತ್ರಿಗಳೂ ನಾಶ ಹೊಂದುತ್ತವೆಯಾಗಿ ಪಾಂಚ ರಾತ್ರವೆಂದು ಪ್ರಸಿದ್ಧವು.

ರಾಮಾನುಜ—ಪಂಚೇಂದ್ರಿಯಗಳ ನಾಶಕಾರಣವಾದ ತೇಜಸ್ಸು ಈ ಪಾಂಚರಾತ್ರಾಗಮ ವನ್ನು ನಾನು ಕೂಲಂಕಶವಾಗಿ ಓದಲೇಬೇಕು ಗುರುಗಳೆ.

ಮಹಾಪೂರ್ಣ—ಖಂಡಿತ ಓದು, ಕೊನೆಯದಾಗಿ ಈ ಹೆಸರು ಬರಲು ಕಾರಣವಾದ ಅಹಿರ್ಬುಧ್ನ್ಯ ಸಂಹಿತೆಯ ವಿಚಾರ ತಿಳಿಸುವೆನು. ಇದು ನಿನಗೆ ಮುಂದೆ ಅರ್ಚಾವತಾರ ಮತ್ತು ಮೋಕ್ಷ ಮಾರ್ಗ ಪ್ರಚಾರಕ್ಕೆ ಬಹಳ ಅನುಕೂಲವಾಗುವುದು.

ರಾಮಾನುಜ—ತಿಳಿಸಿ ಗುರುಗಳೆ.

ಮಹಾಪೂರ್ಣ—"ಶತ್ಪರವ್ಯೂಹ, ವಿಭವ ಸ್ವಭಾವಾದಿ ನಿರೂಪಣಂ ।
ಪಂಚರಾತ್ರಾಹ್ವಯ ತಂತ್ರಂ ಮೋಕ್ಷೈಕಫಲಲಕ್ಷಣಂ ॥

ಭಗವಂತನ ಪರವ್ಯೂಹ, ವಿಭವ ಅರ್ಚ, ಅಂತರ್ಯಾಮಿ, ಸ್ವರೂಪಗಳನ್ನು ನಿರೂಪಮಾಡಿ ಮೋಕ್ಷಮಾರ್ಗ ಬೋಧಕವಾದ್ದರಿಂದ ಪಾಂಚರಾತ್ರ ಎಂದು ಹೆಸರು ಬಂದಿದೆ.

ರಾಮಾನುಜ—ಗುರುಗಳೇ ಇಷ್ಟು ಒಳ್ಳೆಯ ಗ್ರಂಥವನ್ನು ನಾನು ಓದಲೇಬೇಕು. ಆಳವಂದಾರ್ಯರಿಗೆ ಪ್ರತಿಜ್ಞೆಮಾಡಿರುವ ಮೋಕ್ಷ ಪ್ರಚಾರಕ್ಕೆ ನನಗೆ ಇದರಿಂದ ಬಹಳ ಸಹಾಯವಾಗುವುದು.

ಮಹಾಪೂರ್ಣ—ರಾಮಾನುಜರೇ ನಾನು ಪಾಂಚರಾತ್ರಾಗಮದ ವಿಷಯ ಸಂಕ್ಷಿಪ್ತವಾಗಿ ತಿಳಿಸಿರುವೆನು. ಈ ದಿನ ಇಷ್ಟಕ್ಕೇ ಅಧ್ಯಯನ ನಿಲ್ಲಿಸಿ ಬಾಕಿ ವಿಷಯ ಗಳನ್ನು ಮುಂದೆ ತಿಳಿಯುವ ಈಗ ವಿಶ್ರಮಿಸೋಣ

ರಾಮಾನುಜ—ನಮಸ್ಕರಿಸಿ, ಆಗಲಿ ಗುರುಗಳೆ, ಪುನಃ ಸಂಧಿಸೋಣ.

(ರಾಮಾನುಜರು ಹೋಗುವರು ಮಹಾಪೂರ್ಣರು ಮತ್ತೊಂದುಕಡೆ ಹೋಗುವರು)

(ಒಂದು ವಾರದ ನಂತರ)

(ಅದೇ ಮರ ಮಹಾಪೂರ್ಣರು ಓದುತ್ತಾ ಕುಳಿತಿರುವರು. ರಾಮಾನುಜರು ಬಂದು ನಮಸ್ಕರಿಸಿ ಪೀಠವನ್ನಲಂಕರಿಸುವರು)

ಮಹಾಪೂರ್ಣ—ಪ್ರಿಯಪುತ್ರನೆ ಈಗ ನೀನು ಒಂದುವಾರದ ಅಧ್ಯಯನದಲ್ಲಿ, ನ್ಯಾಸತತ್ವ, ಗೀತಾರ್ಥ ಸಂಗ್ರಹ, ಸಿದ್ಧಿತ್ರಯ, ವ್ಯಾಸಸೂತ್ರ, ಪಾಂಚರಾತ್ರಾಗಮ ಗಳ ಸಾಕಷ್ಟು ಜ್ಞಾನ ಸಂಪಾದಿಸಿರುವೆ. ನಿನ್ನ ಜ್ಞಾನದಾಹವು ಮೆಚ್ಚ ತಕ್ಕದು ಈಗ ನೀನು ಮತ್ತೊಂದು ಕೆಲಸ ಮಾಡಬೇಕು.

ರಾಮಾನುಜ—ಪ್ರಸಾದಿಸಿ ಗುರುಗಳೆ.

ಮಹಾಪೂರ್ಣ—ಇಲ್ಲಿಂದ ಸ್ವಲ್ಪ ದೂರದಲ್ಲಿ ತಿರುಕೋಟ್ಟಿಯೂರ್ ಎಂಬ ಪಟ್ಟಣವಿದೆ. ಅದನ್ನು ಗೋಷ್ಠಿಪುರವೆಂದು ಕರೆಯುತ್ತಾರೆ. ಅಲ್ಲಿ ಗೋಷ್ಠಿಪೂರ್ಣ ರೆಂಬ ಭಕ್ತರೊಬ್ಬರಿದ್ದಾರೆ. ಅವರಿಗೆ ಶ್ರೀ ಆಳವಂದಾರರು ಅತಿ ರಹಸ್ಯ ಮಂತ್ರವನ್ನು ಉಪದೇಶಿಸಿದ್ದಾರೆ.

ರಾಮಾನುಜ—ಅತ್ಯಂತ ರಹಸ್ಯಮಂತ್ರವಹುದೇ ಗುರುಗಳೇ ?

ಮಹಾಪೂರ್ಣ—ಅವರೊಬ್ಬರನ್ನು ಬಿಟ್ಟರೆ ಅದು ಮತ್ಯಾರಿಗೂ ತಿಳಿಯದು. ನೀನು ತಡಮಾಡದೆ ಅಲ್ಲಿಗೆ ಹೋಗಿ ಅವರಿಂದೊಡನೆ ಆ ಮಂತ್ರವನ್ನು ತಿಳಿದುಕೊ.

ರಾಮಾನುಜ—ಆಗಲಿ, ಈಗಲೇ ಹೊರಡುವೆನು (ಎಂದು ಎದ್ದು) ಗುರುಗಳೆ ನಮಸ್ಕರಿಸು ವೆನು ಆಶೀರ್ವಾದ ಮಾಡಿ.

ಮಹಾಪೂರ್ಣ—ವಿಜಯೀಭವ (ಆಶೀರ್ವದಿಸುವರು ರಾಮಾನುಜರು ಹೋಗುವರು. ಮಹಾಪೂರ್ಣರು ಪ್ರೀತಿಯಿಂದ ಅವರು ಹೋದ ದಿಕ್ಕನ್ನೇ ನೋಡು ತ್ತಿರುವರು )

(ತೆರೆ ಬೀಳುವುದು)

# ದೃಶ್ಯ—೮

[ಗೋಷ್ಠಿಪುರದಲ್ಲಿ ಗೋಷ್ಠಿಪೂರ್ಣರ ಮನೆ ಗೋಷ್ಠಿಪೂರ್ಣರು ಕುಳಿತು ಗ್ರಂಥಾವಲೋಕನ ಮಾಡುತ್ತಿರುವರು, ರಾಮಾನುಜರು ಬಂದು ನಮಸ್ಕರಿಸುವರು.]

ರಾಮಾನುಜ—ಮಹಾಮಹಿಮರೆ, ಗುರುಗಳೇ ತಮ್ಮಲ್ಲಿ ನನ್ನದೊಂದು ಬಿನ್ನಹ ನಾನು ಮಹಾಪೂರ್ಣರ ಶಿಷ್ಯ ನನ್ನನ್ನು ರಾಮಾನುಜ ಎಂದು ಕರೆಯುವರು. ನಾನು ಆಳವಂದಾರ್ಯರ ಶಿಷ್ಯನೂ ಅಹುದು

ಗೋಷ್ಠಿಪೂರ್ಣ—ಏನದು ?

ರಾಮಾನುಜ—ತಮಗೆ ಆಳವಂದಾರರು ಅನುಗ್ರಹಿಸಿರುವ ರಹಸ್ಯ ಮಂತ್ರವನ್ನು ನನಗೆ ದಯಪಾಲಿಸಬೇಕೆಂದು ಪ್ರಾರ್ಥಿಸುತ್ತೇನೆ

ಗೋಷ್ಠಿಪೂರ್ಣ—ಅದು ಹೇಗೆ ಸಾಧ್ಯ ? ನಿನ್ನಲ್ಲಿ ತಪಸ್ಸಿನ ಫಲವಿಲ್ಲ. ವ್ರತನೇಮಗಳ ಅಭ್ಯಾಸವಿಲ್ಲ. ಈಗ ಅನುಗ್ರಹಿಸಲಾಗುವುದಿಲ್ಲ, ನಾಳೆ ಬಾ

ರಾಮಾನುಜ—(ನಮಸ್ಕರಿಸಿ) ನಾಳೆ ಬರುವೆನು (ಹೋಗುವರು)

(ಅದೇ ಮನೆ ಗೋಷ್ಠಿಪೂರ್ಣರು ಕುಳಿತು ಅಧ್ಯಯನ ಮಾಡುತ್ತಿರುವರು. ರಾಮಾನುಜರು ಬಂದು ನಮಸ್ಕರಿಸಿ)

ರಾಮಾನುಜ—ಗುರುಗಳೆ ವಂದಿಸುವೆನು

ಗೋಷ್ಠಿಪೂರ್ಣ—ಏನು ಬಂದೆ ?

ರಾಮಾನುಜ—ನನಗೆ ಆ ರಹಸ್ಯ ಮಂತ್ರವನ್ನು ಅನುಗ್ರಹಿಸಿ

ಗೋಷ್ಠಿಪೂರ್ಣ—ಈಗಲೇ ಏನವಸರ. ನಾಳೆ ಬಾ

ರಾಮಾನುಜ—ಗುರುಗಳೆ ನಾನು ತಮ್ಮಲ್ಲಿ ಬರುತ್ತಿರುವುದು ಇದು ಹದಿನೆಂಟನೆಯ ಬಾರಿ ನನ್ನ ಅಪರಾಧವನ್ನಾದರೂ ತಿಳಿಸಿ. ನಾನು ನನ್ನನ್ನು ತಿದ್ದಿಕೊಳ್ಳುವೆನು (ಹೇಳುತ್ತಾ ನೆಲದಮೇಲೆ ಕುಳಿತು ಅಳಲು ಮೊದಲು ಮಾಡುವರು ಗೋಷ್ಠಿಪೂರ್ಣರ ಮನಸ್ಸು ಕರಗುವುದು ದಯೆಯಿಂದ ರಾಮಾನುಜರ ಮೈದಡವಿ)

ಗೋಷ್ಠಿಪೂರ್ಣ—ರಾಮಾನುಜ ಅಳಬೇಡ ಏಕೆ ಅಳುವೆ ?

ರಾಮಾನುಜ—ತಾವು ನನ್ನ ಪರೀಕ್ಷಿಸುತ್ತಿದ್ದೀರಿ, ಅಳದೆ ಇನ್ನೇನು ಮಾಡಲಿ ? ನಾನು ಹದಿನೆಂಟನೆಯ ಬಾರಿ ತಮ್ಮಲ್ಲಿ ಬರುತ್ತಿರುವುದು

ಗೋಷ್ಠಿಪೂರ್ಣ—ಬಾ ರಾಮಾನುಜ ನಿನಗೆ ಉಪದೇಶಿಸುವೆನು, ರಾಮಾನುಜ ಈ ರಹಸ್ಯ ಮಂತ್ರವನ್ನು ರಹಸ್ಯವಾಗಿಯೇ ಇಡಬೇಕು. ಮಹಾವಿಷ್ಣು ವಿನಃ ಮತ್ಯಾರು ಇದನ್ನು ಅರಿಯರು.

ರಾಮಾನುಜ—ತಮ್ಮ ಅಪ್ಪಣೆಯನ್ನು ಮೀರುವುದಿಲ್ಲ

ಗೋಷ್ಠಿಪೂರ್ಣ—ಮತ್ತೆ ಯಾರು ಈ ಮಂತ್ರವನ್ನು ಪಠಿಸುವರೋ ಅಂತಹವರು ತಮ್ಮ ಅವಸಾನದ ನಂತರ ಸರ್ವ ಪಾಪಗಳಿಂದ ಬಿಡುಗಡೆ ಹೊಂದಿ ನೇರಾಗಿ ವೈಕುಂಠವನ್ನು ಸೇರುತ್ತಾರೆ.

ರಾಮಾನುಜ—ಅಷ್ಟು ಅಮೂಲ್ಯ ಮಂತ್ರವನ್ನು ಬೇಗ ಅರುಹಿ ಗುರುಗಳೇ !

ಗೋಷ್ಠಿಪೂರ್ಣ—ಮತ್ತೆ ಕೇಳು ಇದನ್ನು ಹೊರಗೆ ತಿಳಿಸಿದರೆ ನಿನಗೆ ರೌರವ ನರಕ ಪ್ರಾಪ್ತವಾಗುವುದು.

(ಕಿವಿಯಲ್ಲಿ ಮಂತ್ರವನ್ನು ಉಪದೇಶಿಸುವರು. ರಾಮಾನುಜರು ಅತ್ಯಂತ ಸಂತೋಷ ತೋರಿಸುತ್ತ ಪುಳಕಾಂಕಿತರಾಗುವರು )

ರಾಮಾನುಜ—(ಹರ್ಷಚಿತ್ತದಿಂದ) ಗುರುಗಳೇ ನಾನೇ ಧನ್ಯ ! ನಾನೇ ಧನ್ಯ (ಎಂದು ನಮಸ್ಕರಿಸುವರು) ಗುರುಗಳೆ, ತಮ್ಮ ಶತಕೋಟಿ ಶಿಷ್ಯರಲ್ಲಿ ನಾನೇ ಸೌಭಾಗ್ಯಶಾಲಿ. (ಸಾಷ್ಟಾಂಗ ಪ್ರಣಾಮ ಮಾಡುವರು )

ಗೋಷ್ಠಿಪೂರ್ಣ—ರಾಮಾನುಜ ಮಾಡಿದ ಪ್ರತಿಜ್ಞೆ ನೆನಪಿರಲಿ ಬಹಳ ಎಚ್ಚರಿಕೆ ಇಂದಿರು.

ರಾಮಾನುಜ—ಆಗಲಿ ಗುರುಗಳೆ ತಮ್ಮ ಅಪ್ಪಣೆಯನ್ನು ಮೀರುವುದಿಲ್ಲ ನಾನು ಇನ್ನು ಶ್ರೀರಂಗಕ್ಕೆ ಹೊರಡುವೆನು ತಾವು ಅನುಗ್ರಹಿಸಿರಿ.

ಗೋಷ್ಠಿಪೂರ್ಣ—(ಎರಡು ಕೈಗಳನ್ನು ಎತ್ತಿ) ದೀರ್ಘಾಯುಷ್ಮಾನ್ ಭವ. ವಿಜಯೀ ಭವ. ಹೋಗಿ ಬಾ ನಿನಗೆ ಭಗವಂತನ ಕೃಪೆಯಿಂದ ವೈಕುಂಠವೇ ಲಭಿಸಲಿ. (ರಾಮಾನುಜರು ಮತ್ತೆ ನಮಸ್ಕರಿಸಿ ಹೊರಡುವರು)

ಗೋಷ್ಠಿಪೂರ್ಣ—ನನಗೂ ಹೊತ್ತಾಯಿತು ನಾನೂ ತೆರಳುವೆನು. (ಮತ್ತೊಂದು ಕಡೆಗೆ ಹೋಗುವರು)

(ತೆರೆ ಬೀಳುವುದು)

## ದೃಶ್ಯ—೯

[ಗೋಷ್ಠಿಪುರದ ದೊಡ್ಡ ಬೀದಿ. ಅತ್ಯಂತ ಎತ್ತರವಾದ ಗೋಪುರದಿಂದ ಕೂಡಿದ ವಿಷ್ಣು ದೇವಾಲಯ ಗೋಚರಿಸುವುದು. ರಾಮಾನುಜರು ಬಹು ಹುಮ್ಮಸ್ಸಿನಿಂದ ಓಡೋಡಿ ಬರುವರು. ದಾಶರಥಿ ಕೂರೇಶರೂ ಓಡೋಡಿ ಬರುವರು.]

ರಾಮಾನುಜ—ಬನ್ನಿರಿ. ಬನ್ನಿರಿ, ಬೇಗ ಬನ್ನಿರಿ, ಓಡೋಡಿ ಬನ್ನಿರಿ ಎಲ್ಲರೂ ವಿಷ್ಣು ದೇವಾಲಯದ ಬಳಿ ಸೇರಿರಿ. ನಿಮಗೆಲ್ಲಾ ಒಂದು ಅನರ್ಘ್ಯ ರತ್ನವನ್ನು ದಯಪಾಲಿಸುತ್ತೇವೆ.

(ನಾಲ್ಕೈದು ಜನರು ಓಡೋಡಿ ಬರುವರು.)



ಗೋಷ್ಠಿಪುರದ ಗೋಪುರದ ಮೇಲೆ ರಾಮಾನುಜರು ನಿಂತು
"ಓಂ ನಮೋ ನಾರಾಯಣಾಯ" ಎಂಬ ತಿರುಮಂತ್ರದ ಉಪದೇಶ ಮಾಡುತ್ತಿರುವುದು

ಜನರು—(ಒಟ್ಟಿಗೆ) ಏನು, ಏನು ? ಏಕೆ ಹೀಗೆ ಕೂಗಿಕೊಳ್ಳುವಿರಿ ?

ರಾಮಾನುಜ—ಬೇಗ ಬನ್ನಿ, ಈಗಲೇ ಬನ್ನಿ ನಿಮಗೆ ಬೆಲೆ ಕಟ್ಟಲಾಗದ ರತ್ನ ನೀಡುತ್ತೇನೆ. ತಡಮಾಡಿದರೆ ಇಲ್ಲ.

ಜನರು—(ಓಡೋಡಿ ಬಂದು) ಯಾವ ರತ್ನ ? ಎಂತಹ ರತ್ನ ? ಎಲ್ಲಿ ಅದು ? ಬೇಗ ತೋರಿಸಿ ?

ರಾಮಾನುಜ—ತೋರಿಸುತ್ತೇನೆ. ಎಲ್ಲಾ ವಿಷ್ಣು ದೇವಾಲಯದ ಬಳಿ ಬಂದು ಸೇರಿ, ಬೇಗ ಬೇಗ ಬನ್ನಿ

(ದೇವಾಲಯದ ಬಳಿಗೆ ಓಡುವರು ಎಲ್ಲರೂ ಓಡೋಡಿ ಬರುವರು. ಒಂದು ದೊಡ್ಡ ಗುಂಪು ಸೇರುವುದು )

ಎಲ್ಲರೂ—ಎಲ್ಲಿ ಆ ಮಹಾನುಭಾವ ? ಕಾಣಿಸುವುದೇ ಇಲ್ಲವಲ್ಲಾ !

ಒಬ್ಬ—ಆಗೋ ಅಲ್ಲಿ ನೋಡಿ !

ಮತ್ತೊಬ್ಬ—ಎಲ್ಲಿ ? ಎಲ್ಲಿ ಅವನು ?

ಇನ್ನೊಬ್ಬ—ಅಲ್ಲಿ ನೋಡಿ ಅಗೋ ಆ ಗೋಪುರದ ತುದಿಯಲ್ಲಿ.

ಎಲ್ಲರೂ—ಹೌದು, ಅಲ್ಲಿ, ಆ ಗೋಪುರದ ತುದಿಯಲ್ಲಿ ಕೂತಿದ್ದಾರೆ

ಮತ್ತೊಬ್ಬ—ಅಲ್ಲಿ ಇನ್ನು ಇಬ್ಬರು ಕೂತಿದ್ದಾರೆ ಅವರು ಯಾರು ?

ಇನ್ನೊಬ್ಬ—ಅವರೇ ಅವರ ಶಿಷ್ಯರಾದ ಕೂರೇಶ, ದಾಶರಥಿಯವರು

ಎಲ್ಲರೂ—ಏನು ಹೇಳಿ

ರಾಮಾನುಜ—(ಗೋಪುರದಲ್ಲಿ ನಿಂತು ಗಟ್ಟಿಯಾಗಿ) ಕೇಳಿರಿ, ಕೇಳಿರಿ ಎಲ್ಲಾ ಮನಗೊಟ್ಟು ಕೇಳಿರಿ.

ಎಲ್ಲರೂ—ಹೇಳಿ, ಬೇಗ ಹೇಳಿ.

ರಾಮಾನುಜ—ಸೋದರ ಸೋದರಿಯರೇ ನೀವೇ ನನ್ನ ಜೀವ ನೀವುಗಳು ಈಗ ಈ ಸಂಸಾರ ಬಂಧನದಿಂದ ಮುಕ್ತಿ ಪಡೆಯಲು ಅಪೇಕ್ಷಿಸುತ್ತೀರಾ ?

ಎಲ್ಲರೂ—ಹೌದು, ಮುಕ್ತಿ ಬೇಕು ನಮಗೆ ಮುಕ್ತಿ ಬೇಕು.

ರಾಮಾನುಜ—ಹಾಗಾದರೆ ನಾನು ಒಂದು ದಿವ್ಯ ಮಂತ್ರವನ್ನು ಉಪದೇಶಿಸುತ್ತೇನೆ. ಅದು ನಿಮಗೆ ಮತ್ತೆಲ್ಲೂ ದೊರಕದು.

ಕೆಲವರು—ನಮಗೆ ಅಂತಹ ಮಂತ್ರವೇ ಬೇಕು.

ರಾಮಾನುಜ—ಅಷ್ಟೇ ಅಲ್ಲ, ಭಗವಂತನ ಕೃಪೆಗೆ ಪಾತ್ರರಾಗಿ ಎಲ್ಲರೂ ಮೋಕ್ಷವನ್ನು ಪಡೆಯಿರಿ.

ಕೆಲವರು—ಹಾಗಾದರೆ ಬೇಗ ಹೇಳಿ ಅನರ್ಘ್ಯ ಮಂತ್ರವನ್ನು ಕರುಣಿಸಿ.

ರಾಮಾನುಜ—ನಾನು ಹೇಳುವ ಮಂತ್ರವನ್ನು ನೀವು ಜೊತೆಗೂಡಿಸಿ ಹೇಳಿ. (ಆನಂದ ದಿಂದ ಹೃದಯಾಂತರಾಳದಿಂದ ಜೋರಾಗಿ)

" ಓಂ ನಮೋ, ನಾರಾಯಣಾಯ "

ಎಲ್ಲರೂ—ಓಂ ನಮೋ, ನಾರಾಯಣಾಯ.

ರಾಮಾನುಜ—ಓಂ. ನಮೋ ನಾರಾಯಣಾಯ

ಎಲ್ಲರೂ—ಓಂ, ನಮೋ ನಾರಾಯಣಾಯ.

ರಾಮಾನುಜ—(ಸಿಂಹ ಗರ್ಜನೆಯಿಂದ) ಓಂ ನಮೋ ನಾರಾಯಣಾಯ.

ಎಲ್ಲರೂ—ಓಂ ನಮೋ ನಾರಾಯಣಾಯ

ಒಬ್ಬ—ನಮಗೆ ಈ ದಿನ ಅಮೃತಪಾನ ಮಾಡಿದಷ್ಟು ಸಂತೋಷವಾಯಿತು.

ಮತ್ತೊಬ್ಬ—ಗಾಜಿನ ಚೂರನ್ನು ಆರಿಸಿ ಬಂದವನಿಗೆ ವಜ್ರವೇ ಸಿಕ್ಕಿದಷ್ಟು ಸಂತೋಷ ವಾಯಿತು.

ಮಗದೊಬ್ಬ—ಪ್ರಪಂಚದ ಜಂಜಡಗಳಿಂದ ದೂರವಿದ್ದು ಮುಕ್ತಿ ಮಾರ್ಗದ ದೀವಿಗೆ ಯನ್ನು ತೋರಿದ ನೀವೇ ಧನ್ಯರು ಇಂತಹ ಅನರ್ಘ್ಯ ರತ್ನವನ್ನು ಒದಗಿಸಿಕೊಟ್ಟ ತಮಗೆ ಅನಂತಾನಂತ ವಂದನೆಗಳು (ಎಂದು ಸಾಷ್ಟಾಂಗ ನಮಸ್ಕಾರ ಮಾಡುವನು ಎಲ್ಲರೂ ಒಟ್ಟಿಗೆ ನಮಸ್ಕಾರ ಮಾಡುತ್ತಾ ಒಬ್ಬೊಬ್ಬರಾಗಿ ತೆರಳಲು ಸಿದ್ಧರಾಗುವರು.)

ರಾಮಾನುಜ—ದಾಶರಥಿ, ಕೂರೇಶರೇ ಬನ್ನಿ ನಾವಿನ್ನು ಗೋಷ್ಠಿಪೂರ್ಣರಿಗೆ ಪಾದಪೂಜೆ ಸಲ್ಲಿಸುವ. (ಮೂವರೂ ಗೋಪುರವನ್ನು ಇಳಿದು ಬರುವರು, ಒಂದು ಕಡೆಯಿಂದ ರಾಮಾನುಜರೂ ಮತ್ತು ಅವರ ಶಿಷ್ಯರೂ ಬರುವರು. ಮತ್ತೊಂದುಕಡೆಯಿಂದ ಗೋಷ್ಠಿಪೂರ್ಣರು ಅವರ ಶಿಷ್ಯರು ಬರುವರು ಗೋಷ್ಠಿಪೂರ್ಣರು ದಾಪುಗಾಲು ಹಾಕುತ್ತ ಕಣ್ಣಿನಲ್ಲಿ ಅಗ್ನಿಕಣಗಳನ್ನು ಕಾರುತ್ತ ಬೇಗ ಬೇಗ ಬರುವರು.)

ಗೋಷ್ಠಿಪೂರ್ಣ—ಎಲ್ಲಿ ? ಎಲ್ಲಿ ನನ್ನನ್ನು ನರಕಕ್ಕೆ ನೂಕಿದ ಆ ಮಹಾಪಾಪಿ ಎಲ್ಲಿ ? (ರಾಮಾನುಜರೂ ಅವರ ಶಿಷ್ಯರೂ ಸಾಷ್ಟಾಂಗ ಪ್ರಣಾಮ ಮಾಡುವರು.)

ಗೋಷ್ಠಿಪೂರ್ಣ—(ಕಾಲನ್ನು ಹಿಂದಕ್ಕೆ ಸರಿಸಿ) ಛೀ ! ನೀಚನೇ ! ದೂರ ತೊಲಗು, ಹತ್ತಿರ ಬರಬೇಡ : ದೂರ ಹೋಗು.

ರಾಮಾನುಜ—ಗುರುಗಳೆ ಏಕೆ ನನ್ನಮೇಲೆ ಕೋಪ.

ಗೋಷ್ಠಿಪೂರ್ಣ—ಕೋಪವಂತೆ ಕೋಪ ! ಎಲಾ ಎಲಾ ಮಹಾಪಾಪಿ ! ಮಾಡಿದ್ದೆಲ್ಲಾ ಮಾಡಿ ಏನೂ ಅರಿಯದವನಂತೆ ಕೇಳುತ್ತಿರುವೆಯಾ ?

ರಾಮಾನುಜ—ತಮ್ಮ ಕೋಪಕ್ಕೆ ಕಾರಣ ತಿಳಿಯಲಿಲ್ಲವಲ್ಲಾ ?

ಗೋಷ್ಠಿಪೂರ್ಣ—ಕಾರಣ ತಿಳಿಯಲಿಲ್ಲವೆ ? ಎಲವೋ ಪಾಪಿ ! ಆ ಬೆಲೆಕಟ್ಟಲಾಗದ ವಜ್ರವನ್ನು ಧಾರೆ ಎರೆದೆನಲ್ಲಾ ನೀನು ಏನು ಮಾಡಿದೆ ?

ರಾಮಾನುಜ—ಆ ಅಮೂಲ್ಯ ವಜ್ರವನ್ನು ಸಾವಿರಾರು ಜನರಿಗೆ ಉಪದೇಶ ಮಾಡಿ ಹಂಚಿದೆ !

ಗೋಷ್ಠಿಪೂರ್ಣ—ಉಪದೇಶ ಮಾಡಿದೆಯಾ ? ಬೀದಿಪಾಲು ಮಾಡಿ ನನ್ನನ್ನು ಭಯಂಕರವಾದ ರೌರವ ನರಕಕ್ಕೆ ತಳ್ಳಿದೆಯಾ ? ಇಲ್ಲಿಂದ ತೊಲಗು, ನೀನು ಇಲ್ಲಿ ನಿಲ್ಲಬೇಡ, ನನ್ನ ಮುಂದೆ ನಿಲ್ಲಲರ್ಹತೆ ಇಲ್ಲ, ನನ್ನ ಬಳಿ ಸುಳಿಯಬೇಡ ಬೇಗ ತೊಲಗು. (ಕಣ್ಣಿನಲ್ಲಿ ಕಿಡಿ ಕಾರುತ್ತ ಕಿರುಚುವರು )

ರಾಮಾನುಜ—ಪೂಜ್ಯರೆ, ನಾನು ತಮ್ಮ ಆಜ್ಞೆ ಮೀರಿದೆ ನಾನು ಈಗಲೇ ನರಕಕ್ಕೆ ಹೋಗಲು ಸಿದ್ಧನಿದ್ದೇನೆ ಆದರೆ

ಗೋಷ್ಠಿಪೂರ್ಣ—ಏನು ಆದರೆ ?

ರಾಮಾನುಜ—ತಾವು ನನಗೆ ಉಪದೇಶ ಮಾಡುವಾಗ, ಯಾರು ಈ ಮಂತ್ರವನ್ನು ಕೇಳುತ್ತಾರೋ ಅವರೆಲ್ಲಾ ಮೋಕ್ಷ ಪಡೆಯುತ್ತಾರೆಂದು ಹೇಳಿದಿರಿ

ಗೋಷ್ಠಿಪೂರ್ಣ—ಹೌದು, ಹೇಳಿದೆ, ಅದಕ್ಕಾಗಿ ನೀನು ಬೀದಿಯಲ್ಲಿ ಹೋಗಿ ಬರುವವರಿಗೆಲ್ಲಾ ತಿಳಿಸುತ್ತಿದ್ದೀಯಾ ? ಅಯೋಗ್ಯ !

ರಾಮಾನುಜ—ಕ್ಷಮಿಸಿ ಗುರುಗಳೆ, ಈ ಪಟ್ಟಣದಲ್ಲಿರುವ ಸ್ತ್ರೀ ಪುರುಷರನ್ನು ಒಟ್ಟುಗೂಡಿಸಿ ರಹಸ್ಯ ಮಂತ್ರವನ್ನು ಉಪದೇಶಿಸಿದೆ.

ಗೋಷ್ಠಿಪೂರ್ಣ—ಉಪದೇಶಿಸಿದೆಯಾ ? ಮೂರ್ಖ ! ದ್ರೋಹಿ ! ನಿನ್ನಂತವನ ಮುಖ ತೋರಿಸಬೇಡ ಅಯ್ಯೋ ! ಮಹಾಪಾಪಿ ! ಮಹಾವಿಷ್ಣುವಿನಃ ಯಾರೂ ಅರಿಯದ ಈ ಮಂತ್ರವನ್ನು ನಾನು ಎಷ್ಟು ಜೋಪಾನವಾಗಿಟ್ಟಿದ್ದೆ !

ರಾಮಾನುಜ—ಗುರುಗಳೇ ಶಾಂತರಾಗಿ, ನನ್ನದೊಂದು ಅರಿಕೆ ಈ ಸಾವಿರಾರು ಸ್ತ್ರೀ ಪುರುಷರು ವೈಕುಂಠಕ್ಕೆ ತೆರಳಿದರೆ ನಾನೇ ಧನ್ಯ ಜನರೆಲ್ಲಾ ಸುಖ ಪಡಬೇಕೆಂಬುದು ನನ್ನ ಪರಮ ಇಚ್ಛೆ ಇದಕ್ಕಿಂತ ಶ್ರೇಯಸ್ಕರವೂ, ಲಾಭದಾಯಕವೂ ಆದ ಕರ್ತವ್ಯ ಬೇರೆ ಉಂಟೆ ? ನಾನೀಗ ತಮ್ಮ ಆಜ್ಞೆಯನ್ನು ಮೀರಿದೆ ಇದು ಸತ್ಯ ಅದಕ್ಕಾಗಿ ನನಗೊಬ್ಬನಿಗೆ ನರಕವು ದೊರಕಲಿ ನಾನು ಸಿದ್ಧ. ನಾನು ಮತ್ತೊಮ್ಮೆ ತಮ್ಮಲ್ಲಿ ಕ್ಷಮೆ ಬೇಡುತ್ತೇನೆ

(ಗೋಷ್ಠಿಪೂರ್ಣರ ಮಾತುಗಳನ್ನು ಕೇಳಿ ನಡುಗುತ್ತಿದ್ದ ಜನ ರಾಮಾನುಜರ ಮಾತು ಕೇಳಿ ಉಸಿರೆಳೆದುಕೊಂಡು ಆನಂದದಿಂದ ರಾಮಾನುಜರನ್ನು ನೋಡುವರು. ಗೋಷ್ಠಿಪೂರ್ಣರ ಮುಖದಲ್ಲಿ ರೋಷವು ಸ್ವಲ್ಪ ಸ್ವಲ್ಪವಾಗಿ ಇಳಿಯುವುದು. ಮತ್ತೆ ಆನಂದವು ಮೂಡುವುದು )

ಗೋಷ್ಠಿಪೂರ್ಣ—(ಬಹಳ ಹರ್ಷಾತಿರೇಖದಿಂದ) ಓ ರಾಮಾನುಜಾ ! ನಾನು ನಿನ್ನ ನಿಸ್ವಾರ್ಥ ಭಾವಕ್ಕೆ, ತ್ಯಾಗಬುದ್ಧಿಗೆ ಮೆಚ್ಚಿದೆ ! (ಅವರನ್ನು ಬಿಗಿಯಾಗಿ ತಬ್ಬಿಕೊಳ್ಳುವರು.)

ರಾಮಾನುಜ—(ಕೂಡಲೇ ಗುರುಗಳ ಪಾದದ ಮೇಲೆ ಬಿದ್ದು ನಮಸ್ಕರಿಸುತ್ತಾ) ಓ ಮಹಾಪುರುಷರೇ ! ತಾವು ದೇವಲೋಕದಿಂದ ನನಗಾಗಿ ಬಂದ ಗುರುಗಳು. ತಮ್ಮ ಮಂತ್ರ ಪವಿತ್ರವಾದುದು. ತಮ್ಮ ಶ್ರೀಮುಖದ ಅಮೃತವಾಣಿ ನನಗೆ ಅನುಗ್ರಹೀತವಾಯಿತು ಈ ದಿವ್ಯ ಮಂತ್ರವು ವಿಶ್ವದ ಜನಾಂಗವನೆಲ್ಲಾ ರಕ್ಷಿಸುವ ಶಕ್ತಿಯನ್ನು ಪಡೆದಿದೆ ಈಗಾಗಲೇ ಸಾವಿರಾರು ಸ್ತ್ರೀ ಪುರುಷರ ಪಾಪ ನೀಗಿಸಿದೆ.

ಗೋಷ್ಠಿಪೂರ್ಣ—ರಾಮಾನುಜ ನಿಜವಾಗಿಯೂ ನೀನು ಪವಿತ್ರವಾದ ಕೆಲಸ ಮಾಡಿದೆ. ನನಗೆ ಇದರ ಅರಿವಿಲ್ಲದೆ ಹೋಯಿತು

ರಾಮಾನುಜ—ಪೂಜ್ಯ ಗುರುಗಳೇ, ತಾವು ನನಗೆ ಅನುಗ್ರಹಿಸಿದಿರಿ ಇಲ್ಲದಿದ್ದರೆ ನಾನೆಲ್ಲಿ ಇಂತಹ ಪವಿತ್ರ ಕೆಲಸ ಮಾಡುತ್ತಿದ್ದೆ ? ಇದಕ್ಕೆ ತಾವೇ ಕಾರಣ ಕರ್ತರು ತಮ್ಮಲ್ಲಿ ಮತ್ತೊಂದು ಅರಿಕೆ, ತಾವು ನನ್ನನ್ನು ಎಂದೆಂದೂ ತಮ್ಮ ಪಾದಾರವಿಂದಗಳ ಸೇವಕನಾಗಿರಲು ಅನುಗ್ರಹಿಸಬೇಕು. (ಎರಡೂ ಕೈಗಳನ್ನು ಜೋಡಿಸುವರು.)

ಗೋಷ್ಠಿಪೂರ್ಣ—(ಸಂತೋಷಾಶ್ಚರ್ಯಗಳಿಂದ) ಪೂಜ್ಯರೇ ! ತಮ್ಮಂತಹ ಶಿಷ್ಯನನ್ನು ಪಡೆದ ನಾನೇ ಧನ್ಯ ! ನೀವು ವಿಶಾಲ ಹೃದಯಿಗಳು ನಿಮ್ಮನ್ನು ಸಾಕ್ಷಾತ್ ಮಹಾ ವಿಷ್ಣುವಿನ ಅವತಾರವೆಂದೇ ಹೇಳಬೇಕು ತಾವು ದಯವಿಟ್ಟು ನನ್ನನ್ನು ಅನ್ಯಥಾ ಭಾವಿಸಬೇಡಿ.

ರಾಮಾನುಜ—(ದೈನ್ಯತೆಯಿಂದ) ಗುರುಗಳೆ, ಹಾಗೆನ್ನಬೇಡಿ ನನ್ನಲ್ಲಿ ಯಾವ ಯೋಗ್ಯತೆಯೂ ಇಲ್ಲ. ಎಂದೆಂದೂ ನಾನು ನಿಮ್ಮ ಕಿಂಕರ ನನಗೆ ಶ್ರೀರಂಗಕ್ಕೆ ತೆರಳಲು ಅನುಜ್ಞೆ ನೀಡುವಿರಾ ? (ಮೂವರೂ ನಮಸ್ಕರಿಸುವರು )

ಗೋಷ್ಠಿಪೂರ್ಣ—ರಾಮಾನುಜರೇ ಹೋಗಿ ಬನ್ನಿ. ದಿವ್ಯ ಮಂತ್ರವನ್ನು ಜನತೆಗೆ ಮುಟ್ಟಿಸಲು ಯಶಸ್ಸನ್ನು ಪಡೆಯಿರಿ (ರಾಮಾನುಜರೂ ಅವರ ಶಿಷ್ಯರೂ ತೆರಳುವರು,)

ಗೋಷ್ಠಿಪೂರ್ಣ—ಆಹಾ ! ಎಂತಹ ನೀತಿ ಶಿಖಾಮಣಿ ! ವಿನಯಶೀಲ !

(ತೆರೆ ಬೀಳುವುದು)

# ಅಂಕ—೪

## ದೃಶ್ಯ—೧

[ಶ್ರೀರಂಗ—ಯಾಮುನಾಚಾರ್ಯರ ಮಠ  ಶ್ರೀ ರಾಮಾನುಜರು ಕೆಲವು ಶಿಷ್ಯರ ಜೊತೆ ಅಧ್ಯಯನ, ಅಧ್ಯಾಪನ ಮಾಡುತ್ತಾ ಕುಳಿತಿರುವರು]

ರಾಮಾನುಜ—ನಾವು ಸಹಸ್ರ ಗೀತೆಯ ವಿಚಾರ ತಿಳಿದುಕೊಂಡೆವು  ಈ ದಿನ ನಾವು ಶ್ರೀ ನಮ್ಮಾಳ್ವಾರ್ ಅಂದರೆ ಶ್ರೀ ಶಠಕೋಪ ಸ್ವಾಮೀಜೀಯವರ ವಿಚಾರ ತಿಳಿದುಕೊಳ್ಳೋಣ.

ಶಿಷ್ಯರು—ಆಗಲಿ ಗುರುಗಳೇ, ದಿವ್ಯಸೂರಿಗಳಲ್ಲಿ ಪ್ರಮುಖರಾದ ನಮ್ಮಾಳ್ವಾರ್ ವಿಚಾರ ತಿಳಿದುಕೊಳ್ಳಲೇ ಬೇಕು.

ರಾಮಾನುಜ—ಕೇಳಿ, ಅವತಾರದ ಪ್ರಕಾರ ನಮ್ಮಾಳ್ವಾರರ ಸ್ಥಾನ ಐದನೆಯದು. ಆದರೆ ದಿವ್ಯಸೂರಿಗಳಲ್ಲಿ ಇವರು ಅತ್ಯಂತ ಪ್ರಧಾನರಾದವರು  ಎಲ್ಲಾ ದಿವ್ಯಸೂರಿಗಳಿಂದ ರಚಿತವಾದ ದಿವ್ಯ ಪ್ರಬಂಧಗಳು ಒಂದು ಕಾಲದಲ್ಲಿ ಕಣ್ಮರೆಯಾದಾಗ ಶ್ರೀ ಗುರುಪರಂಪರೆಯ ಮೂರ್ಧನ್ಯಾವತಾರಿಯಾದ ಶ್ರೀಮನ್ನಾಥ ಮುನಿಗಳು ದಿವ್ಯ ಪ್ರಬಂಧಗಳನ್ನು ಪುನರುದ್ಧಾರ ಗೊಳಿಸಲು, ಶ್ರೀ ಶಠಕೋಪ ಸ್ವಾಮಿಯವರ ಅವತಾರ ಸ್ಥಳವಾದ "ಶ್ರೀ ಕುರುಕಾಪುರಿ" ಎಂಬ ಸ್ಥಳಕ್ಕೆ ಹೋಗಿ, ಹುಣಿಸೇ ಮರದಡಿಯಲ್ಲಿ ಕುಳಿತು, ಶ್ರೀ ಮಧುಕರ ಕವಿಯು ರಚಿಸಿರುವಂತ, ನಮ್ಮಾಳ್ವಾರ್ ಸ್ತುತಿ ವಿಷಯಕವಾದ ೧೨,೦೦೦ ಪದ್ಯಗಳನ್ನು ಜಪಮಾಡಿದರು.

ಒಬ್ಬ ಶಿಷ್ಯ—ಹುಣಿಸೇ ಮರದಡಿಯಲ್ಲಿ ಕುಳಿತು ಹನ್ನೆರಡು ಸಾವಿರ ಪದ್ಯಗಳನ್ನು ಜಪ ಮಾಡಿದರೆ ?  ಮತ್ತೆ ಏನಾಯಿತು ?

ರಾಮಾನುಜ—ಹೌದು, ಜಪಮಾಡಿದರು  ಸ್ವಯಂ ಶಠಕೋಪ ಸ್ವಾಮಿಯವರು ದರ್ಶನವಿತ್ತು, ತಮ್ಮ ನಾಲ್ಕು ಸಾವಿರ (೪೦೦೦) ದಿವ್ಯ ಪ್ರಬಂಧಗಳ ಉಪದೇಶ ಮಾಡಿದರು.

ಮತ್ತೊಬ್ಬ ಶಿಷ್ಯ—ನಮ್ಮಾಳ್ವಾರೇ ಸ್ವಯಂ ಉಪದೇಶ ಮಾಡಿದರೆಂದರೆ ಪರಮಾಶ್ಚರ್ಯ !

ರಾಮಾನುಜ—ಅಹುದು, ಅವರೇ ಉಪದೇಶ ಮಾಡಿದರು. ಅವರ ವೈಭವವನ್ನು ಸೂಚಿಸುವ ಈ ದಿವ್ಯ ಪದ್ಯವನ್ನು ಕೇಳಿ

ಪ್ರತ್ಯು: ಶ್ರಿಯಃ ಪ್ರಸಾದೇನ ಪ್ರಾಪ್ತ ಸರ್ವಜ್ಞ ಸಂಪದಂ ।
ಪ್ರಪನ್ನಜನಕೂಟಸ್ಥಂ ಪ್ರಪದ್ಯೆ ಶ್ರೀಪರಾಂಕುಶಂ ॥

ಭಗವಂತನ ಕೃಪೆಯಿಂದ ಸರ್ವಜ್ಞರಾದ ಶ್ರೀ ವೈಷ್ಣವಕೂಟಸ್ಥ ಶ್ರೀ ಶಠಕೋಪ ಸ್ವಾಮಿಯ ಶರಣಾರ್ಥಿ ಯಾಗುತ್ತೇನೆ. ಶ್ರೀ ಪರಾಂಕುಶ, ಶ್ರೀ ಬಕುಲಾಭರಣ ಎಂಬ ಅನೇಕ ನಾಮಧೇಯಗಳುಂಟು.

ದಾಶರಥಿ—ಇಷ್ಟೆಲ್ಲಾ ಪ್ರಾಜ್ಞರಾಗಿಯೂ ಸರ್ವಜ್ಞರಾಗಿಯೂ ಇದ್ದರು, ದಿವ್ಯ ಪ್ರಬಂಧ ಗಳ ಎಣಿಕೆಯಲ್ಲಿ ಪ್ರಥಮ ಸ್ಥಾನ ಸಿಗಲಿಲ್ಲವಲ್ಲವೆ ?

ರಾಮಾನುಜ—ಹೌದು ಪ್ರಥಮ ಸ್ಥಾನ ಶ್ರೀ ವಿಷ್ಣು ಭಕ್ತರಿಗೇ ದೊರೆಯಿತು.

ಕೂರೇಶ—ಗುರುಗಳೇ ಇವರುಗಳ ವಿಚಾರ ತಿಳಿದೆವು. ಸ್ವಲ್ಪ ತಿರುಮಳಿಶಿ ಆಳ್ವಾರ ವಿಚಾರ ತಿಳಿಸುವಿರಾ ?

ರಾಮಾನುಜ—ತಿರುಮಳಿಶಿ ಆಳ್ವಾರಿಗೆ ಭಕ್ತಿಸಾರರು ಎಂಬ ಹೆಸರುಂಟು. ಇವರು ಭೃಗು ಮಹರ್ಷಿಗಳ ಪುತ್ರರು ಆದರೂ ಇವರ ಲಾಲನೆ ಪಾಲನೆ ಬೇಡ ದಂಪತಿಗಳ ಮನೆಯಲ್ಲಿ ಆಯಿತು. ಪೇಯಾಳ್ವಾರ ಕೃಪಾಕಟಾಕ್ಷದಿಂದ ಶ್ರೀಮನ್ನಾರಾಯಣನ ಭಕ್ತರಾದರು

ಕೂರೇಶ—ಭೃಗು ಮಹರ್ಷಿಗಳ ಪುತ್ರರು ಬೇಡ ದಂಪತಿಗಳಲ್ಲಿ ಲಾಲನೆ ಪಾಲನೆ ಪಡೆದು ಪೇಯಾಳ್ವಾರ್ ಕೃಪೆಯಿಂದ ಶ್ರೀಮನ್ನಾರಾಯಣನ ಭಕ್ತರಾದರೆಂದು ತಿಳಿದೆವು.

ರಾಮಾನುಜ—ಮತ್ತೆ ಕೇಳಿ, ಇವರು "ನಾನ್ಮುಕ್ಕ ತಿರುವಂದಾದಿ, ತಿರುಚಿಂದವಿರುತ್ತಂ" ಎಂಬ ಎರಡು ಪ್ರಬಂಧವನ್ನು ರಚಿಸಿರುತ್ತಾರೆ. ತಿರುವಂದಾದಿಯಲ್ಲಿ ಶ್ರೀಮನ್ನಾರಾಯಣನೇ ಜಗತ್ಕಾರಣನು ಮತ್ತು ಸರ್ವೇಶ್ವರನು ಎಂಬು ದನ್ನು ಸ್ಥಾಪಿಸಿದ್ದಾರೆ. ತಿರುವೇಂಗಡವು ಇವರಿಗೆ ಅತ್ಯಂತ ಗಣ್ಯವಾದ ಪವಿತ್ರವಾದ ಕ್ಷೇತ್ರವೆಂದು ಕಾಣುತ್ತೆ. ತಿರುವೇಂಗಡ (ತಿರುಪತಿ)ದ ಬಗ್ಗೆ ಹೆಚ್ಚಿನ ಪಾಶರವನ್ನು ಹಾಡಿದ್ದಾರೆ.

ದಾಶರಥಿ—ಗುರುಗಳೇ ತಿರುವೇಂಗಡದ ಮಹಿಮೆಯ ಬಗ್ಗೆ ಸ್ವಲ್ಪ ತಿಳಿಸುವಿರಾ ?

ರಾಮಾನುಜ—ತಿಳಿಸುವೆನು

ವಿಷ್ಣುವಿನ ಆದಿದೈವರೂಪವೇ ವೇಂಕಟೇಶಾವತಾರ. ಅವನು ಪಾಪ ಪರಿ ಹಾರಕ. ಬ್ರಹ್ಮ ರುದ್ರರಿಬ್ಬರೂ ಉತ್ತರದಿಂದ ಪರ್ವತಾರೋಹಣ ಮಾಡಿ ವೇಂಕಟನಾಥಸ್ವಾಮಿ ದರ್ಶನಕ್ಕೆ ಬರುವರು. ಶ್ರೀಮನ್ನಾರಾಯಣನನ್ನು ಆರಾಧಿಸಿದ ಮಾರ್ಕಂಡೇಯ ಮಹರ್ಷಿಯು ಪರಮಾತ್ಮನ ನಿತ್ಯ ಯೌವನ ಅವಸ್ಥೆಯಲ್ಲಿದ್ದಾನೆ ಎಂದೂ ವೇಂಕಟಾಚಲವನ್ನು ಅದ್ಭುತ ರೀತಿಯ ಪರ್ವತವೆಂದು ಆಳ್ವಾರರು ವರ್ಣಿಸಿದ್ದಾರೆ.

ಅನಂತಾರ್ಯ—ಸ್ವಲ್ಪ ಆ ಪರ್ವತದ ಮಹಿಮೆಯನ್ನು ತಿಳಿಸುವಿರಾ ?

ರಾಮಾನುಜ—ಆಗಲಿ, ಅಲ್ಲಿ ಆನೆ, ಸಿಂಹ. ಘಾಳಿ, ಚಿನ್ನ, ರತ್ನ ಮುತ್ತು ಪುಷ್ಪದಿಂದ ಕೂಡಿದ ಮರಗಳಿವೆ ಜಲಪಾತ ಝುರಿಗಳಿವೆ. ಸಮಸ್ತ ಇಷ್ಟಾರ್ಥ ವನ್ನು ಪೂರೈಸುವ ಅಷ್ಟೈಶ್ವರ್ಯ ಭಂಡಾರವೇ ಈ ಪರ್ವತ.

ದಾಶರಥಿ—ಇಷ್ಟೊಂದು ಭಂಡಾರಗಳಿಂದ ಕೂಡಿದೆಯೇ ಈ ಪರ್ವತ !

ರಾಮಾನುಜ—ಇದು ಬರೀ ಭಂಡಾರವೇ ಅಲ್ಲ ಸಮಸ್ತ ಪಾಪವನ್ನೂ, ವ್ಯಾಧಿಯನ್ನೂ ಇದು ಪರಿಹರಿಸುತ್ತದೆ.

ಕೂರೇಶ—ಈ ಪರ್ವತ ಸಮಸ್ತ ಪಾಪ ಪರಿಹಾರಕ ಮತ್ತು ವ್ಯಾಧಿ ಪರಿಹಾರಕವೆ ? ಇನ್ನು ಪರಮಾತ್ಮ ?

ರಾಮಾನುಜ—ಪರಮಾತ್ಮನು ಶಂಖ ಚಕ್ರಧಾರಿಯಾಗಿದ್ದಾನೆ ತನ್ನ ಭಕ್ತರಿಗಾಗಿ ಅಪಾರ ವಿಶ್ವಾಸ ತೋರಿಸುವನು. ಭಕ್ತರೇ ಅವನ ಶರೀರ. ಅವರಿಗೆ ಸ್ವಾಮಿಯು ಐಹಿಕ ಐಶ್ವರ್ಯ ಕರುಣಿಸುವುದಲ್ಲದೆ ಅವರಿಗೆ ರಕ್ಷಕನೂ ಆಗಿರುತ್ತಾನೆ ಮುಕ್ತೈಶ್ವರ್ಯವನ್ನು ದಯಪಾಲಿಸುವನು ಹೀಗೆ ಪರ ಮಾತ್ಮನನ್ನು ಪಡೆಯುವುದರಿಂದ ಚೇತನನು ಇಹಲೋಕ ವ್ಯಾಪಾರ ವನ್ನು ಸಂತೋಷದಿಂದ ಅನುಭವಿಸಿ ಕೊನೆಗೆ ಮುಕ್ತಿಯನ್ನು ಪಡೆಯು ವನು ಅವನ ಪವಿತ್ರ ಅನುಗ್ರಹ ಪಡೆಯಬೇಕಾದರೆ ಅವನಲ್ಲಿ ಶರಣಾಗತಿ ಮಾಡಬೇಕು ಶ್ರೀ ಶೈಲವೇ ಭೂವೈಕುಂಠ ಇಲ್ಲೇ ಹುಟ್ಟಿ, ಇಲ್ಲೇ ಜೀವಿತವನ್ನೆಲ್ಲಾ ಕಳೆದವರಿಗೆ ಅವಸಾನಾನಂತರವೂ ವೈಕುಂಠದಲ್ಲೇ ಶ್ರೀಮನ್ನಾರಾಯಣನ ದಿವ್ಯ ಪಾದಾರವಿಂದಗಳಲ್ಲಿ ಆಶ್ರಯ ಪಡೆಯುವರು.

ಅನಂತಾರ್ಯ—ಗುರುಗಳೇ, ಶ್ರೀ ಶೈಲದಲ್ಲಿರುವುದರಿಂದ ಅಷ್ಟು ಪುಣ್ಯ ಬರುವುದೆ ?

ರಾಮಾನುಜ—ಖಂಡಿತ ಪುಣ್ಯ ಉಂಟು ನಿಮ್ಮಲ್ಲಿ ಯಾರಾದರೂ ಶ್ರೀ ಶೈಲಕ್ಕೆ ಹೋಗಿ ಅಂತ್ಯ ಕಾಲದವರೆಗೂ ಶ್ರೀನಿವಾಸರ ಸೇವೆಗಾಗಿ ಬೆಟ್ಟದ ಮೇಲೆ ಹೂವು ಮತ್ತು ತುಳಸೀ ತೋಟವನ್ನು ಮಾಡುತ್ತಿರಿ.

ಅನಂತಾರ್ಯ—ಪೂಜ್ಯರೇ ಕೃಪೆ ಇಟ್ಟು ಈ ಸೇವಕನಿಗೆ ಆಜ್ಞೆಮಾಡಿ ತಮ್ಮ ಆಜ್ಞೆ ಯನ್ನು ಶಿರಸಾವಹಿಸಿ, ತಿರುಪತಿಗೆ ಹೋಗಿ ಭಗವಂತನ ಕೈಂಕರ್ಯ ಮಾಡಿ ಕೃತಾರ್ಥನಾಗುತ್ತೇನೆ (ಕೈ ಮುಗಿಯುವರು)

ರಾಮಾನುಜ—ನಾನೇ ಧನ್ಯ ಹೋಗಿ ಬಾ ನಿನ್ನಂತಹ ಪುತ್ರನೊಬ್ಬ ಹುಟ್ಟಿ ವಂಶಕ್ಕೆ ಕೀರ್ತಿಯನ್ನು ತಂದವನಾದೆ ನಿನ್ನ ಶಿಷ್ಯನಾಗಿ ಪಡೆದ ನಾನೇ ಧನ್ಯ. (ಅನಂತಾರ್ಯರು ನಮಸ್ಕರಿಸಿ ಹೋಗುವರು)

(ತೆರೆ ಬೀಳುವುದು)

## ದೃಶ್ಯ—೨

[ರಾಮಾನುಜರೂ ಶಿಷ್ಯರೂ ಬರುವರು]

**ರಾಮಾನುಜ**—ನಾವಿನ್ನು ಶ್ರೀ ಶೈಲಕ್ಕೆ ತೆರಳೋಣವೆ ? ಅನಂತಾರ್ಯನಿಗೆ ಸೂಚನೆ ಇತ್ತಾಗಿದೆ.

**ಶಿಷ್ಯರು**—ತೆರಳೋಣ ಗುರುಗಳೆ, ನಾವೆಲ್ಲಾ ಸಿದ್ಧರಾಗಿದ್ದೇವೆ.

**ರಾಮಾನುಜ**—ಅಷ್ಟ ಸಹಸ್ರ ಹಳ್ಳಿಗೆ ಹೋಗೋಣ. ಅಲ್ಲಿ ಯಜ್ಞೇಶ್ವರರ ಮನೆಯಲ್ಲಿ ತಂಗಲು ಸುದ್ದಿ ಹೊತ್ತು ಹೋದ ಶಿಷ್ಯರು ಬಂದರೆ ?

(ಇಬ್ಬರು ಶಿಷ್ಯರು ಬರುವರು ನಮಸ್ಕರಿಸುವರು)

**ರಾಮಾನುಜ**—ಯಜ್ಞೇಶ್ವರರು ಏನೆಂದರು ?

**ಶಿಷ್ಯರು**—ಅವರು ಸುದ್ದಿಯನ್ನು ಕೇಳಿ ಅತ್ಯಂತ ಆನಂದಿತರಾಗಿ ತಮ್ಮ ಸ್ವಾಗತಕ್ಕೆ ಹಲವಾರು ಬಗೆಯ ಏರ್ಪಾಡಿನಲ್ಲಿ ತೊಡಗಿದರು.

ರಾಮಾನುಜ—ಏನು ನಿಮ್ಮ ಸತ್ಕಾರವನ್ನು ಮಾಡಲಿಲ್ಲವೆ ?

ಶಿಷ್ಯರು—ಇಲ್ಲ ಗುರುಗಳೆ. ನಾವು ಅವಮಾನಿತರಾಗಿ ಬಂದೆವು

ರಾಮಾನುಜ—ಯಜ್ಞೇಶರು ಭಾಗವತಾಪಚಾರಮಾಡಿದರೆ ? ಹಾಗಾದರೆ ನಾವು ಅವರ ಮನೆಗೆ ಹೋಗುವುದು ಬೇಡ.

ಕೂರೇಶ—ಮತ್ತೆಲ್ಲಿ ತಂಗೋಣ ಗುರುಗಳೆ ?

ರಾಮಾನುಜ—' ಕಾರ್ಪಾಸರಾಮ ' ಆದೇ ವರದಾರ್ಯನ ಮನೆಯಲ್ಲಿ ಅವನು ಬಡವನಾದರೂ ಪರಮ ಭಕ್ತ ಪರಿಶುದ್ಧವಾದ ಹೃದಯ ಉಳ್ಳವನು.

ಶಿಷ್ಯರು—ಆಗಲಿ, ಗುರುಗಳೆ, ಅಲ್ಲೇ ತಂಗೋಣ.

ರಾಮಾನುಜ—ಬನ್ನಿ, ಎಲ್ಲರೂ ಹೋಗುವ.

(ವರದಾರ್ಯರ ಮನೆ. ಅದು ಒಂದು ಮುರುಕಲು ಹೆಂಚಿನ ಮನೆಯಾಗಿರುವುದು. ಮನೆಯಲ್ಲಿ ಯಾವ ರೀತಿಯ ಆಡಂಬರದ ವಸ್ತುಗಳೂ ಇಲ್ಲ. ಚೆನ್ನಾಗಿ ಗುಡಿಸಿ, ಸಾರಿಸಿ, ರಂಗವಲ್ಲಿಯಿಂದ ಅಲಂಕರಿಸಿರುವುದು ಇರುವ ಕೆಲವೇ ಸಾಮಾನುಗಳನ್ನು ಓರಣವಾಗಿಟ್ಟಿರುವರು. (ರಾಮಾನುಜರು ಬಾಗಿಲ ಬಳಿ ಬಂದು)

ರಾಮಾನುಜ—(ಯಾರೂ ಇಲ್ಲದೆ ಇರುವುದನ್ನು ನೋಡಿ) ಕಾರ್ಪಾಸರಾಮ, ಕಾರ್ಪಾಸರಾಮ, (ಉತ್ತರ ಬರುವುದಿಲ್ಲ) ಯಾರೂ ಇಲ್ಲವೆ ? ವರದಾರ್ಯ ? ವರದಾರ್ಯ (ಇನ್ನೂ ಒಂದು ಹೆಜ್ಜೆ ಮುಂದಿಡುವರು. ಸುತ್ತಲೂ ನೋಡುವರು) ಲಕ್ಷ್ಮೀ ಲಕ್ಷ್ಮೀ ತಾಯಿ ಲಕ್ಷ್ಮೀ

ಲಕ್ಷ್ಮೀ—(ಬಿಚ್ಚಿದ ಜಡೆ, ಒದ್ದೆಯಾದ ಕೂದಲು, ಸುಂದರಿಯಾದ ಯುವತಿ, ಬಿಳಿ ಬಣ್ಣ, ತಿದ್ದಿದ ಹುಬ್ಬು, ಮೀನಿನಂತೆ ಕಣ್ಣುಗಳು, ಕಿರಿದಾದ ಬಾಯಿ ಶಂಖದಂತಹ

ಕಿವಿಗಳು, ಚಂಪಕದಂತೆ ನಾಸಿಕ, ನಗುತ್ತಿರುವ ಮುಖ, ಚಿಂದಿಯನ್ನು ಉಟ್ಟಿರು ವಳು, ಅದೂ ಮೈ ಮುಚ್ಚಿರುವುದಿಲ್ಲ ) ಬಾಗಿಲ ಹಿಂದೆ ನಿಂತು ಬಗ್ಗಿ ನೋಡಿ ಚಪ್ಪಾಳೆಯನ್ನು ಹಾಕಿ ತಾನಿರುವ ಸ್ಥಿತಿಯನ್ನು ಸೂಚಿಸುವಳು.

ರಾಮಾನುಜ—(ಬಗ್ಗಿ ನೋಡಿ) ಅಯ್ಯೋ ಪಾಪ ! ಲಕ್ಷ್ಮಿಗೆ ಉಡಲು ಬಟ್ಟೆಯೂ ಇಲ್ಲವೆ ಎಂದು ತಾವು ಹೊದ್ದಿದ್ದ ಉತ್ತರೀಯವನ್ನು ಒಳಕ್ಕೆ ಎಸೆಯು ವರು.

ಲಕ್ಷ್ಮೀ—(ಆ ಬಟ್ಟೆಯಿಂದ ಹೇಗೋ ಮೈ ಮುಚ್ಚಿಕೊಂಡು) ಹೊರಗೆ ಬಂದು ರಾಮಾನುಜರಿಗೆ ನಮಸ್ಕರಿಸುವಳು. (ಹುಚ್ಚಿಯಂತೆ ನಮಸ್ಕರಿಸುವುದೂ ಏಳುವುದೂ ಮಾಡುತ್ತಿರುವಳು.)

ರಾಮಾನುಜ—ಲಕ್ಷ್ಮೀ, ಏಕೆ ಹೀಗೆ ಮತಿಭ್ರಂಶಳಂತೆ ಆಡುವೆ ?

ಲಕ್ಷ್ಮೀ—(ಚೇತರಿಸಿಕೊಂಡು) ನಮ್ಮ ಯಜಮಾನರು ಬಿಕ್ಷೆಗೆ ಹೋಗಿರುವರು ಈ ನೀರಲ್ಲಿ ಕೈಕಾಲು ತೊಳೆದುಕೊಳ್ಳಿ. ಆಗೊ ! ಅಲ್ಲಿ ಕಾಣುವ ಕೊಳದಲ್ಲಿ ಮಿಂದು ಬನ್ನಿ ಕೆಲವೇ ಕ್ಷಣದಲ್ಲಿ ಶ್ರೀಹರಿಗೆ ನೈವೇದ್ಯವನ್ನು ಸಿದ್ಧಪಡಿಸು ತ್ತೇನೆ. ಕೃಪೆಯಿಟ್ಟು ಇಂದಿನ ಬಿಕ್ಷೆಯನ್ನು ಇಲ್ಲೇ ಸ್ವೀಕರಿಸಿ

ರಾಮಾನುಜ—ಆಗಲಿ, ನಾವು ಈಗ ನದಿಗೆ ಹೋಗಿ ಸ್ನಾನ ಸಂಧ್ಯಾವಂದನೆ ಮುಗಿಸಿ ಬರುವೆವು

(ಎಲ್ಲರೂ ಹೋಗುವರು. ಲಕ್ಷ್ಮಿ ಒಳಗೆ ಬಂದು ಡಬ್ಬಗಳನ್ನು ಅಳ್ಳಾಡಿಸಿ)

ಲಕ್ಷ್ಮೀ—ಇಯ್ಯೋ ದೇವರೇ, ನಾನೇನುಮಾಡಲಿ ! ಮನೆಯಲ್ಲಿ ಒಂದು ಹಿಡಿ ಅಕ್ಕಿಯೂ ಇಲ್ಲವಲ್ಲಾ ! ಏನುಮಾಡುವುದು ? ಇಷ್ಟು ಜನರಿಗೂ ಬಿಕ್ಷೆಯನ್ನು ಹೇಗೆ ನೀಡಲಿ ? (ಹಾಗೆಯೇ ಸ್ವಲ್ಪಹೊತ್ತು ಚಿಂತಾಕ್ರಾಂತಳಾಗಿ ಕೂಡುವಳು ನಂತರ ತನಗೆ ತಾನೇ) ಆ ಶ್ರೀಮಂತ ವ್ಯಾಪಾರಿಯು ನನ್ನ ಸ್ನೇಹಿತೆಯರ ಜೊತೆ ಹೇಳಿಕಳುಹಿಸಿದ್ದ, ಆದರೆ ನಾನು ಒಪ್ಪಲಿಲ್ಲ. ಈಗ ಅದಕ್ಕೆ ತಕ್ಕ ಸಮಯವಾಗಿದೆ "ಕಲಿಯನ" ಎಂಬ ಭಕ್ತನು ಕಳ್ಳತನಮಾಡಿ ತನ್ನ ಇಷ್ಟ ದೈವವನ್ನು ಪೂಜಿಸಿದನಲ್ಲವೆ ? ಈಗ ನಾನೇಕೆ ಈ ಮಜ್ಜ್ಜ, ಮಾಂಸದಿಂದ ಕೂಡಿದ ಶರೀರವನ್ನು ಆ ವ್ಯಾಪಾರಿಗೆ ನೀಡಿ, ಅವನ ಕಾಮ ತೃಪ್ತಿಗೊಳಿಸಿ, ಆದರಿಂದ ಆ ವ್ಯಾಪಾರಿಯ ಬಳಿ ಸಾಮಾನುಗಳನ್ನು ಪಡೆದು ಆಚಾರ್ಯರಿಗೂ ಅವರ ಶಿಷ್ಯರಿಗೂ ತೃಪ್ತಿಯಿಂದ ಭೋಜನವನ್ನು ನೀಡಿ ನನ್ನ ಆಚಾರ್ಯ ಕೈಂಕರ್ಯವನ್ನು ಮಾಡಬಾರದು ? ನನ್ನ ಸ್ವಾಮಿಯ ಮಾನ ಉಳಿಸಬಾರದು ? ನಾನು ಈಗಲೇ ಆ ವ್ಯಾಪಾರಿಯ ಬಳಿ ಹೋಗುವೆನು. ಆದರೆ ನನಗೆ ಉಡುಪು ? ಆ ನನ್ನ ಸ್ನೇಹಿತೆಯನ್ನೇ ಕೇಳುವೆನು. (ಹೋಗುವಳು)

(ತೆರೆ ಬೀಳುವುದು)

## ದೃಶ್ಯ—೩

[ಶ್ರೀಮಂತ ವ್ಯಾಪಾರಿಯ ಮನೆ ಒಳ್ಳೆ ಅರಮನೆಯ ರೀತಿ ಇರುವುದು. ವ್ಯಾಪಾರಿಯ ಕೊಠಡಿ. ಎರಡು ದೊಡ್ಡ ದೊಡ್ಡ ಮಂಚಗಳು ಅದರ ಮೇಲೆ ಸುಪ್ಪತ್ತಿಗೆ ಹಾಸಿರುವುದು ಒಂದು ಕಡೆ ಒಂದು ಒರಗು ಪೀಠ. ಎರಡು ಕುರ್ಚಿಗಳು ಹಾಕಿರುವುದು ಒಂದು ಮೂಲೆಯಲ್ಲಿ ಟೀಪಾಯಿನ ಮೇಲೆ ಹೂದಾನಿ ಇರುವುದು. ಗೋಡೆಯಲೆಲ್ಲಾ ಚಿತ್ರ ಕೊರೆದಿರುವುದು. ದಂತದ, ಚಿತ್ರದಿಂದ ಮಾಡಿದ ಬಾಗಿಲು ಶ್ರೀಮಂತ ವ್ಯಾಪಾರಿಯು ರೇಷ್ಮೆಯ ಪಂಚೆ, ರೇಷ್ಮೆಯ ಜುಬ್ಬ ಧರಿಸಿರುವನು ಕ್ರಾಪು ನೀಟಾಗಿ ಬಾಚಿರುವುದು ಕೈಯಲ್ಲಿ ಒಂದು ಪುಸ್ತಕ ಹಿಡಿದು ಒರಗು ಪೀಠದಲ್ಲಿ ಒರಗಿರುವನು ಲಕ್ಷ್ಮಿ ತನ್ನನ್ನು ಚೆನ್ನಾಗಿ ಅಲಂಕರಿಸಿಕೊಂಡು ಬರುವಳು ನೇರಾಗಿ ಬಂದು ವ್ಯಾಪಾರಿಯ ಮುಂದೆ ನಿಲ್ಲುವಳು, ವ್ಯಾಪಾರಿಯು ಅವಳನ್ನು ತಿನ್ನುವ ಹಾಗೆ ನೋಡುವನು ಕಣ್ಣಲ್ಲಿ ಕಾಮ ಪಿಪಾಸೆಯು ಕಾಣುವುದು ಅತ್ಯಂತ ಸಂತೋಷದಿಂದ ಅಂಗ ಚೇಷ್ಟೆಯನ್ನು ಮಾಡುತ್ತಾ ಲಕ್ಷ್ಮಿಯ ಹತ್ತಿರ ಬಂದು)

ವ್ಯಾಪಾರಿ—ಬಾ, ಲಕ್ಷ್ಮೀ! ಬಾ ಬಂದೆಯಾ! ಇಂದಾದರೂ ನನ್ನ ಮೇಲೆ ಕರುಣೆ ಬಂದಿತಾ ? (ಅವಳನ್ನು ತಬ್ಬಿಕೊಳ್ಳಲು ಹೋಗುವನು)

ಲಕ್ಷ್ಮೀ—ಸ್ವಲ್ಪ ತಡಿ, ಏಕಿಷ್ಟು ಅವಸರ ?

ವ್ಯಾಪಾರಿ—ಒಂದು ನಿಮಿಷವೂ ತಾಳಲಾರೆ. ಬೇಗ ಬಾ ಪಲ್ಲಂಗದಲ್ಲಿ ಮಲಗುವಾ. (ಕೈ ಹಿಡಿದೆಳೆಯುವನು)

ಲಕ್ಷ್ಮೀ—(ಕೈ ಬಿಡಿಸಿಕೊಂಡು) ಬರುವೆನು, ಈಗ ಹಗಲು, ರಾತ್ರಿ ಬರುವೆನು.

ವ್ಯಾಪಾರಿ—ಆಗದು, ಆದಾಗದು ರಾತ್ರಿವರೆಗೂ ನಾನು ತಡೆಯಲಾರೆ, ಈಗಲೇ ಬಾ ಬಾ

ಲಕ್ಷ್ಮೀ—ಹಾಗಾದರೆ ಮೊದಲು ನನ್ನ ಮಾತನ್ನು ಕೇಳು ಅದಕ್ಕೆ ನೀನು ಒಪ್ಪಿದರೆ ನಾನು ಬರುವೆನು

ವ್ಯಾಪಾರಿ—ಏನದು ?

ಲಕ್ಷ್ಮೀ—ಈಗ ನನ್ನ ಮನೆಗೆ ಗುರುಗಳೂ ಅವರ ಶಿಷ್ಯರೂ ಬಂದಿರುವರು, ಮನೆಯಲ್ಲಿ ಒಂದು ಕಾಳು ಧಾನ್ಯವೂ ಇಲ್ಲ. ಅವರಿಗೆಲ್ಲಾ ಔತಣ ಮಾಡಿಸುವಷ್ಟು ದವಸ, ಧಾನ್ಯ ಕಳುಹಿಸಿದರೆ ನಾನು ಅವರಿಗೆ ಔತಣ ಮಾಡಿಸಿ ರಾತ್ರಿ ನಿನ್ನ ಬಳಿ ಬರುವೆನು

ವ್ಯಾಪಾರಿ—ನಾನು ಈಗಲೇ ಕಳುಹಿಸಿ ಕೊಡುತ್ತೇನೆ. ಅದಕ್ಕೆ ಯಾಕೆ ಚಿಂತಿಸುವೆ ? ಅಂತೂ ನನ್ನ ಲಕ್ಷ್ಮಿ ಸನ್ನವಳಾದರೆ ಸರಿ,

ಲಕ್ಷ್ಮೀ—ಬರುವೆನಲ್ಲಾ,

ವ್ಯಾಪಾರಿ—ಚೋರಾ . . . ಚೋರಾ . . . . (ಚೋರಾ ಬರುವನು)

ನೀನು ಈಗಲೇ ಹೋಗಿ ಅಂಗಡಿಯಿಂದ ಇವಳು ಕೇಳುವಷ್ಟು ಸಾಮಾನನ್ನು ಇವಳ ಮನೆಗೆ ಕಳುಹಿಸಿ ಕೊಡು

ಚೋರ—ಆಗಲಿ ಬುದ್ಧಿ, ಬನ್ನಿ ತಾಯಿ ತಮಗೆ ಏನು ಬೇಕೊ ತೆಗೆದುಕೊಳ್ಳಿ.

ಲಕ್ಷ್ಮೀ—ನಿನಗೆ ವಂದನೆಗಳು. ನನಗೆ ಬಹಳ ಸಹಾಯ ಮಾಡಿದೆ.

ವ್ಯಾಪಾರಿ—ಖಂಡಿತ ಬರುವೆಯಾ ಲಕ್ಷ್ಮಿ ? ನಾನು ದಾರಿ ಕಾಯುತ್ತಿರುವೆ.

ಲಕ್ಷ್ಮೀ—ಅವರಿಗೆ ಬಿಕ್ಷೆ ನೀಡಿ ಖಂಡಿತ ಬರುವೆನು. (ಲಕ್ಷ್ಮಿ, ಚೋರ ಹೋಗುವರು. ವ್ಯಾಪಾರಿ ಲಕ್ಷ್ಮಿಯನ್ನೇ ತಿನ್ನುವ ಹಾಗೆ ನೋಡುತ್ತಾ ನಿಲ್ಲುವನು)

ವ್ಯಾಪಾರಿ—ಓ ಲಕ್ಷ್ಮಿ ಬಂದ್ಬಿಟ್ಳು ! ನನ್ನ ಲಕ್ಷ್ಮಿ ಬಂದ್ಳು ! ರಾತ್ರಿ ಬರ್‍ತಾಳೆ. (ಹರ್ಷಾತಿರೇಖ ತೋರಿಸುವನು)

(ವರದಾರ್ಯರ ಮನೆ. ರಾಮಾನುಜ ಮೊದಲಾದವರು ಒಬ್ಬೊಬ್ಬರಾಗಿ ಕೈ ಒರೆಸಿಕೊಳ್ಳುತ್ತಾ ಬರುವರು.)

ರಾಮಾನುಜ—ಊಟವು ಬಹಳ ರುಚಿಕರವಾಗಿತ್ತಲ್ಲವೆ ?

ಇಬ್ಬರು ಶಿಷ್ಯರು—ಹೌದು ಗುರುಗಳೇ ಬಹಳ ಚೆನ್ನಾಗಿತ್ತು.

ದಾಶರಥಿ—ನೀವು ವರದಾರ್ಯರು ಕಡು ಬಡವರೆಂದಿರಿ ? ಹೇಗೆ ಇಷ್ಟೊಂದು ರುಚಿಯಾದ ಭೋಜನ ಒದಗಿಸಿದರು ?

ಮತ್ತೊಬ್ಬ ಶಿಷ್ಯ—ಗುರುಗಳೇ ಉಡಲು ಬಟ್ಟೆಯಿಲ್ಲ ಎಂದು ನಿಮ್ಮ ಉತ್ತರೀಯವನ್ನು ಕೊಟ್ಟಿರಿ ? ಅದು ಹೇಗೆ ತಾನೆ ಸಾಧ್ಯ !

ಇನ್ನೊಬ್ಬ—ವರದಾರ್ಯನೂ ಮನೆಯಲಿಲ್ಲದಾಗ ಆ ಮಾತೆ ಹೇಗೆ ತಾನೆ ಇಷ್ಟೆಲ್ಲಾ ಒದಗಿಸಿದಳು ?

ರಾಮಾನುಜ—ತಿಳಿಯಲಿಲ್ಲವಲ್ಲಾ ? (ಲಕ್ಷ್ಮಿ ಒಳಗಿನಿಂದ ಒಂದು ಚಾಪೆಯನ್ನು ತಂದು ಹಾಸುವಳು)

ಲಕ್ಷ್ಮೀ—ಇಲ್ಲಿ ಕುಳಿತು ವಿಶ್ರಮಿಸಿಕೊಳ್ಳಿ. ಇನ್ನೇನು ಅವರು ಬರುವ ವೇಳೆ ಆಯಿತು.

ರಾಮಾನುಜ—ಬಹಳ ಪುಷ್ಕಳವಾದ ಬಿಕ್ಷೆ ನೀಡಿದೆ ! ನೀನು ಅತಿಥಿ ಸತ್ಕಾರವನ್ನು ಅತ್ಯಂತ ಶ್ರದ್ಧಾ ಭಕ್ತಿಯಿಂದ ಮಾಡಿರುವೆ. ಭಗವಂತನು ನಿನಗೆ ಒಳ್ಳೆಯದನ್ನು ಮಾಡಲಿ.

ಲಕ್ಷ್ಮೀ—ಆಚಾರ್ಯರೇ ಕೃತಾರ್ಥಳಾದೆ.

(ವರದಾರ್ಯರು ಬಿಕ್ಷೆಯನ್ನು ಹೊತ್ತು ಬರುವರು. ಮನೆಯ ಮುಂದೆ ಇಷ್ಟು ಭಾಗವತರನ್ನೂ, ಆಚಾರ್ಯರನ್ನೂ ನೋಡಿ ಆಶ್ಚರ್ಯವಾಗುವುದು. ಆಚಾರ್ಯರಿಗೆ ನಮಸ್ಕರಿಸುವರು.)

ವರದಾರ್ಯ—ಆಚಾರ್ಯ ನಾನಿಂದು ಕೃತಾರ್ಥನಾದೆ,

ರಾಮಾನುಜ—ನಿಮ್ಮ ಪತ್ನಿಯವರು ನಮ್ಮನ್ನು ಬಹಳವಾಗಿ ಸತ್ಕರಿಸಿದರು. ನಾವಿಂದು ತೃಪ್ತರಾದೆವು.

ವರದಾರ್ಯ—ಇದು ತಮ್ಮ ಕೃಪೆ.

ರಾಮಾನುಜ—ತಾವು ಹೋಗಿ ಭೋಜನವನ್ನು ಮಾಡಿರಿ.

(ಲಕ್ಷ್ಮೀ ಮತ್ತು ವರದಾರ್ಯರು ಒಳಗೆ ಹೋಗುವರು)

ವರದಾರ್ಯ—ಲಕ್ಷ್ಮೀ ಇಷ್ಟು ಜನಕ್ಕೆ ನೀನು ಹೇಗೆ ಭೋಜನವನ್ನು ಮಾಡಿಸಿದೆ ?

ಲಕ್ಷ್ಮೀ—(ನಮಸ್ಕರಿಸಿ) ತಾವು ನನ್ನನ್ನು ಮನ್ನಿಸುವುದಾದರೆ ನಾನೊಂದು ವಿಚಾರ ತಿಳಿಸುವೆನು

ವರದಾರ್ಯ—ಹೇಳು ಅದೇನು ?

ಲಕ್ಷ್ಮೀ—ತಾವಿಲ್ಲದ ವೇಳೆಯಲ್ಲಿ ಆಚಾರ್ಯರೂ ಆಚಾರ್ಯ ಶಿಷ್ಯರೂ ಆಗಮಿಸಿದರು. ಆಗ ನಾನು ಬಹಳವಾಗಿ ಚಿಂತಿಸಿ ಕೊನೆಗೆ ಒಂದು ನಿರ್ಧಾರಕ್ಕೆ ಬಂದೆ,

ವರದಾರ್ಯ—ಏನೆಂದು ?

ಲಕ್ಷ್ಮೀ—ನಮ್ಮ ಬೀದಿಯಲ್ಲೇ ಇದ್ದಾನಲ್ಲಾ ಆ ಧನಿಕ ಶೆಟ್ಟಿ.

ವರದಾರ್ಯ—ಹೌದು, ಇದ್ದಾನೆ

ಲಕ್ಷ್ಮೀ—ಅವನು ಬಹಳದಿನಗಳಿಂದ ನನ್ನ ಮೇಲೆ ಕಣ್ಣಿಟ್ಟಿದ್ದ. ನನ್ನ ಸ್ನೇಹಿತೆಯರ ಬಳಿ ಹೇಳಿ ಹೇಳಿ ಕಳುಹಿಸುತ್ತಿದ್ದ.

ವರದಾರ್ಯ—ಏನು ? ಹೇಳಿಕಳುಹಿಸುತ್ತಿದ್ದನೆ ?

ಲಕ್ಷ್ಮೀ—ಅಷ್ಟೇ ಅಲ್ಲ, ಹಣದ ಆಸೆ ತೋರಿಸಿ ಕಳುಹಿಸುತ್ತಿದ್ದ.

ವರದಾರ್ಯ—ಏನು ? ಹಣದ ಆಸೆ ತೋರಿಸುತ್ತಿದ್ದನೆ !

ಲಕ್ಷ್ಮೀ—ಹೌದು, ನಾನು ಬೈದು ವಾಪಸ್ಸು ಕಳುಹಿಸುತ್ತಿದ್ದೆ

ವರದಾರ್ಯ—ಈಗ ಏನು ?

ಲಕ್ಷ್ಮೀ—ಆಗ ನಾನು ಬಹಳ ಯೋಚಿಸಿ, ಈ ಅಸ್ಥಿ, ಚರ್ಮ, ಮೂಳೆ, ಮಾಂಸದ ಈ ದೇಹವನ್ನು ಅವನಿಗೆ ಒಪ್ಪಿಸುವೆನೆಂದು ಮಾತುಕೊಟ್ಟು ಆಚಾರ್ಯರ ಸೇವೆ ಸತ್ಕಾರ ಮಾಡಿದೆ

ವರದಾರ್ಯ—(ಗಟ್ಟಿಯಾಗಿ ತಬ್ಬಿಕೊಂಡು) ಲಕ್ಷ್ಮೀ ನಾನು ಧನ್ಯ. ನಾನು ಧನ್ಯ ! ನೀನು ಪಾತಿವ್ರತ್ಯವನ್ನೇ ಪಣವಾಗಿಟ್ಟು ಗುರುಗಳ ಸೇವೆ ಮಾಡಿದೆ ಯಲ್ಲಾ ಅದೇ ಪುಣ್ಯ.

ಲಕ್ಷ್ಮೀ—ನಾಥಾ ! ನಾನೇನು ಅಂತಹದನ್ನು ಮಾಡಿದೇ, ನನ್ನ ಕರ್ತವ್ಯವನ್ನು ಮಾಡಿದೆ.

ವರದಾರ್ಯ—ಶ್ರೀಮನ್ನಾರಾಯಣನೇ ಗುರುವಿನ ರೂಪದಲ್ಲಿ ಬಂದಿದ್ದಾನೆ. ಅವನ ಕೃಪೆಗೆ ನೀನು ಪಾತ್ರಳಾದೆ. ನಾನೆಂತಹ ಅದೃಷ್ಟ ಶಾಲಿ ! ನಿನ್ನಂತಹ ಹೆಂಡತಿಯನ್ನು ಪಡೆದ ನಾನೇ ಭಾಗ್ಯಶಾಲಿ. ನನ್ನನ್ನು ಯಾರೂ

ಬಡವರೆಂದು ಕೇಳುವರು ? ಬಾ, ಆಚಾರ್ಯರಿಗೆ ತಿಳಿಸೋಣ. (ಕೈ ಹಿಡಿದು ಕರೆದುಕೊಂಡು ಹೋಗುವನು. ಇಬ್ಬರೂ ಆಚಾರ್ಯರಿಗೆ ಸುಮ್ಮನೆ ನಮಸ್ಕರಿಸುತ್ತಲೇ ಇರುವರು.)

ರಾಮಾನುಜ—ವರದಾರ್ಯರೇ ಇದೇನು ಹೀಗೆ ನಮಸ್ಕರಿಸುತ್ತಲೇ ಇರುವಿರಿ ?

ವರದಾರ್ಯ—ಕ್ಷಮಿಸಿ ಆಚಾರ್ಯ, ನನ್ನ ಹೆಂಡತಿಯು ತನ್ನ ಪಾತಿವ್ರತ್ಯವನ್ನು ಒತ್ತೆಯಿಟ್ಟು ತಮಗೆ ಸತ್ಕಾರವನ್ನು ನೀಡಿರುವಳು

ರಾಮಾನುಜ—ಹಾಗೇನು ?

ವರದಾರ್ಯ—ಹೌದು ಆಚಾರ್ಯರೆ ? ನಾನು ಅವಳನ್ನು ಮನ್ನಿಸಿರುವೆನು ನೀವು ಈಗ ಆಶೀರ್ವದಿಸಬೇಕು

ರಾಮಾನುಜ—ಆ ಶ್ರೀರಂಗನಾಥನು ಅನುಗ್ರಹಿಸಲಿ (ಎರಡೂ ಹಸ್ತಗಳಿಂದಲೂ ಆಶೀರ್ವಾದ ಮಾಡುವರು. ಇಬ್ಬರೂ ಒಳಗೆ ಹೋಗುವರು)

ಲಕ್ಷ್ಮೀ—ಬನ್ನಿ ಸ್ವಾಮಿ, ಗುರುಗಳ ಶೇಷಾಮೃತವನ್ನು ಭುಂಜಿಸಿ. (ಇಬ್ಬರೂ ಊಟ ಮಾಡುವರು) ನಾನಿನ್ನು ಶ್ರೀಮಂತ ವ್ಯಾಪಾರಿಯ ಮನೆಗೆ ಹೋಗಬೇಕು

ವರದಾರ್ಯ—ನಡೀ ಲಕ್ಷ್ಮೀ, ನಾನೂ ಬರುವೆ

ಲಕ್ಷ್ಮೀ—ತಾಳಿ, ವ್ಯಾಪಾರಿಗೂ ಗುರುಗಳ ತೀರ್ಥ ಪ್ರಸಾದವನ್ನು ತರುವೆನು (ಒಳಗೆ ಹೋಗಿ ತೀರ್ಥ ಪ್ರಸಾದವನ್ನು ತರುವಳು. ಇಬ್ಬರೂ ಹೋಗುವರು)

(ಧನಿಕ ವ್ಯಾಪಾರಿಯ ಮನೆ ಉನ್ನತವಾದ ಉಪ್ಪರಿಗೆಯಿಂದ ಶೋಭಿಸುತ್ತಿದೆ. ದೀಪಾಲಂಕಾರಗಳಿಂದ ಝಗಮಗಿಸುತ್ತಿದೆ )

ವರದಾರ್ಯ—ಲಕ್ಷ್ಮೀ, ನಾನು ಇಲ್ಲೇ ನಿಲ್ಲುವೆನು ನೀನು ಒಳಗೆ ಹೋಗಿ ನಿನ-ಮಾತು ಪೂರೈಸಿ ಬಾ.

ಲಕ್ಷ್ಮೀ—ಆಗಲಿ, (ಲಕ್ಷ್ಮೀ ಸೀದಾ ಧನಿಕನು ಮಲಗುವ ಕೋಣೆಗೆ ಹೋಗುವಳು. ವ್ಯಾಪಾರಿಯು ತನ್ನನ್ನು ಬಹಳವಾಗಿ ಸಿಂಗರಿಸಿಕೊಂಡಿರುವನು. ಕೊಠಡಿಯನ್ನು ಅಂದವಾಗಿ ಸಿಂಗರಿಸಿರುವನು. ಕೊಠಡಿಯು ದೀಪಾಲಂಕಾರಗಳಿಂದ ಜ್ವಾಜ್ವಲ್ಯಮಾನವಾಗಿ ಶೋಭಿಸುತ್ತಿರುವುದು. ಕೊಠಡಿಯಿಂದ ಪರಿಮಳ ಯುಕ್ತವಾದ ಸುಗಂಧವು ಬರುತ್ತಿರುವುದು. ಪಲ್ಲಂಗದ ಮೇಲೆ ಮೆಲ್ಹಾಸು ಹಾಸಿರುವುದು. ಅದು ಜರಿ ಕೆಲಸದಿಂದ ಕೂಡಿರುವುದು ಪಲ್ಲಂಗವು ಹೂವಿನಿಂದಲಂಕರಿಸಿರುವುದು ವ್ಯಾಪಾರಿಯು ಒಂದು ಒರಗು ಪೀಠದ ಮೇಲೆ ಕುಳಿತು ಲಕ್ಷ್ಮಿಯನ್ನೇ ಎದುರು ನೋಡುತ್ತಿರುವನು ಲಕ್ಷ್ಮಿಯು ಒಳಗೆ ಪ್ರವೇಶಿಸಿ ತಲೆತಗ್ಗಿಸಿ ನಿಲ್ಲುವಳು. ಮುಖದಲ್ಲಿ ವೇದನೆಯು ಎದ್ದು ಕಾಣುವುದು. ಬಹಳ ದುಃಖಿತೆಯಾಗಿರುವಳು. ಕೈಯಲ್ಲಿ ತೀರ್ಥ ಪ್ರಸಾದ ವಿರುವುದು

ವ್ಯಾಪಾರಿ—(ಬಹಳ ಆತುರದಿಂದೆದ್ದು) ಬಂದೆಯಾ ಲಕ್ಷ್ಮೀ ಬಂದೆಯಾ ಬೇಗ ಬಾ ಇನ್ನು ನನ್ನಿಂದ ಒಂದು ನಿಮಿಷವೂ ತಡೆಯಲಾಗುವುದಿಲ್ಲ. (ತಬ್ಬಿಕೊಳ್ಳಲು ಹೋಗುವನು)

ಲಕ್ಷ್ಮೀ—ಬಂದೇ ಇದ್ದೀನಲ್ಲಾ ! ನಿನಗಾಗಿ ತಾನೆ ಬಂದಿರುವುದು, ಸ್ವಲ್ಪ ಈ ತೀರ್ಥವನ್ನು ಪ್ರಸಾದವನ್ನು ತೆಗೆದುಕೊ ನಂತರ ರಾತ್ರಿ ಎಲ್ಲಾ ನಮ್ಮದೇ ನಿನಗೆ ತೃಪ್ತಿಯಾಗುವವರೆಗೂ ನಾನು ಇರುತ್ತೇನಲ್ಲಾ ?

ವ್ಯಾಪಾರಿ —ಬಾ ಲಕ್ಷ್ಮಿ, ತೀರ್ಥಾನೂ ಬೇಡ ಪ್ರಸಾದಾನೂ ಬೇಡ ನೀನು ಮೊದಲು ಬಾ.

ಲಕ್ಷ್ಮೀ—ಹಾಗೆನ್ನಬಾರದು, ಗುರುಗಳ ತೀರ್ಥ ಪ್ರಸಾದ ತೆಗೆದುಕೊಂಡರೆ ನಮಗೆ ಒಳ್ಳೆಯದಾಗುವುದು

ವ್ಯಾಪಾರಿ —ಹುಂ, ಸರಿ, ಕೊಡು, ನೀನು ಇಷ್ಟು ನಿರ್ಭಂಧ ಮಾಡಿದರೆ ತೆಗೆದುಕೊಳ್ಳಲೇ ಬೇಕು

ಲಕ್ಷ್ಮೀ—ತೀರ್ಥ ಕೊಡುವಳು. ವ್ಯಾಪಾರಿ ತೆಗೆದುಕೊಳ್ಳುವನು. ಒಂದು ತರಾ ಮುಖಮಾಡುವನು ನಂತರ ಪ್ರಸಾದ ಕೊಡುವಳು ಭುಂಜಿಸುವನು. ಹಾಗೇ ಒರಗು ಪೀಠದ ಮೇಲೆ ದೊಪ್ಪೆಂದು ಕುಳಿತುಕೊಳ್ಳುವನು ಅವನ ಮುಖ ಛಾಯೆಯು ಬದಲಾಗುತ್ತಾ ಹೋಗುವುದು ಕಾಮದಿಂದ ಕೂಡಿದ ಕಣ್ಣುಗಳಲ್ಲಿ ಭಕ್ತಿಯು ಮೂಡುವುದು

ಲಕ್ಷ್ಮೀ—ಅವನನ್ನೇ ನೋಡುತ್ತಾ ನಿಲ್ಲುವಳು. (ತನಗೆ ತಾನೇ) ಇದೇನು ! ಇವನ ಕಣ್ಣಿನ ದೃಷ್ಟಿಯೇ ಬದಲಾಗುತ್ತಿರುವುದು !

(ವ್ಯಾಪಾರಿಯ ಕಣ್ಣಲ್ಲಿ ಧಾರಾಕಾರವಾಗಿ ಕಣ್ಣೀರು ಹರಿಯುವುದು ಗಳಗಳನೆ ಅಳುವನು )

ಲಕ್ಷ್ಮೀ—ವ್ಯಾಪಾರಿ, ವ್ಯಾಪಾರಿ, ಏಕೆ ಅಳುತ್ತಿರುವೆ ? ಏಕೆ ಈ ಕಣ್ಣೀರು ?

ವ್ಯಾಪಾರಿ—(ದೊಪ್ಪನೆ ಅವಳ ಕಾಲುಗಳ ಮೇಲೆ ಬಿದ್ದು) ತಾಯಿ ! ರಕ್ಷಿಸು, ನನ್ನನ್ನು ರಕ್ಷಿಸು !

ಲಕ್ಷ್ಮೀ—ಏಕೆ ಅಳುವೆ ? ನಡೀ ಮಂಚದ ಮೇಲೆ ಮಲಗೋಣ.

ವ್ಯಾಪಾರಿ—ತಾಯಿ ನಿನ್ನ ಸಹನೆಯು ಅದ್ಭುತವಾದುದು ನಿನ್ನ ಗುರುಸೇವೆಯು ಮಹಾ ಮಹಿಮೆಯಿಂದ ಕೂಡಿದುದು ನಿನ್ನ ಪಾತಿವ್ರತ್ಯವನ್ನು ಕೆಡಿಸಲು ಬಂದ ನಾನೆಂತಹ ಪಾಪಿ ! ದಮಯಂತಿಯನ್ನು ಮುಟ್ಟ ಬಂದ ಬೇಡನಂತೆ ನಾನೂ ದಹಿಸಿ ಹೋಗುತ್ತಿದೆ ನನ್ನ ಮೃಗತ್ವವನ್ನು ಹೋಗಿಸಿ ಮನುಷ್ಯನನ್ನಾಗಿ ಮಾಡು (ಪುನಃ ಪುನಃ ನಮಸ್ಕರಿಸುವನು)

ಲಕ್ಷ್ಮೀ—ಏಳು ವ್ಯಾಪಾರಿ ಏಳು ! (ಆಶ್ಚರ್ಯದಿಂದ)

ವ್ಯಾಪಾರಿ—ನನ್ನನ್ನು ಆ ಪರಮ ಪೂಜ್ಯರಾದ ಗುರುಗಳ ಬಳಿ ಕರೆದುಕೊಂಡು ಹೋಗು. ಅವರ ದರ್ಶನ ಲಾಭ ನೀಡು.

ಲಕ್ಷ್ಮೀ—ಆಹಾ! ನಮ್ಮ ಗುರುಗಳು ಎಂತಹ ಪ್ರಭಾವಶಾಲಿಗಳು! ಭಕ್ತರ ಮೇಲೆ ಎಂತಹ ಕರುಣೆಯನ್ನು ಇಟ್ಟಿರುವರು! ನಾನೆಂತಹ ಪರಮ ಭಾಗ್ಯಶಾಲಿ! ಇಂದು ನನ್ನ ಪಾತಿವ್ರತ್ಯವನ್ನು ಆ ನನ್ನ ಪರಮ ಗುರುಗಳು ಕಾಪಾಡಿದರು. (ವ್ಯಾಪಾರಿಯತ್ತ ತಿರುಗಿ) ವ್ಯಾಪಾರಿ, ತಾಳು, ಈಗಲೇ ಬಂದೆ (ಎಂದು ಓಡುವಳು)

ಲಕ್ಷ್ಮೀ—ನಾಥಾ ನಾಥಾ ನಾನು ಬದುಕಿದೆ ನಾನು ಪುನೀತಳಾದೆ ಗುರುಗಳು ಕಾಪಾಡಿದರು (ಪತಿಯ ಪಾದದ ಮೇಲೆ ಬೀಳುವಳು)

ವರದಾರ್ಯ—(ಲಕ್ಷ್ಮಿಯನ್ನು ಎತ್ತಿ) ಲಕ್ಷ್ಮೀ ಏನಿದು! ಏಕೆ ಬಂದೆ? ಏಕೆ ಅಪಚಾರ ಮಾಡಿದೆ?

ಲಕ್ಷ್ಮೀ—ಇಲ್ಲ, ನಾನೇನೂ ಅಪಚಾರ ಮಾಡಲಿಲ್ಲ ಆ ವ್ಯಾಪಾರಿಯೇ ನನ್ನನ್ನು ಕಳುಹಿಸಿದ.

ವರದಾರ್ಯ—ಏಕೆ?

ಲಕ್ಷ್ಮೀ—ಗುರುಗಳ ಚರಣಾಮೃತವನ್ನು ಭುಂಜಿಸಿದ ಬಳಿಕ ಅವನಿಗೆ ಜ್ಞಾನೋದಯವಾಗಿ, ಅವನು ತನ್ನ ತಪ್ಪನ್ನು ಮನ್ನಿಸುವಂತೆ ಕೇಳಿಕೊಂಡ ಅವನಿಗೆ ಗುರುಗಳ ದರ್ಶನ ಮಾಡಿಸಬೇಕಂತೆ

ವರದಾರ್ಯ—ಹಾಗೇನ್ ಲಕ್ಷ್ಮಿ ? ನಾನು ಧನ್ಯ! ನನ್ನ ಮಡದಿ ಪವಿತ್ರಳು. (ಎಂದು ಆಲಂಗಿಸಿಕೊಳ್ಳುವನು. ಇಷ್ಟರಲ್ಲಿ ವ್ಯಾಪಾರಿಯು ಬರುವನು. ಲಕ್ಷ್ಮಿ ನಾಚಿ ದೂರ ಸರಿಯುವಳು)

ಲಕ್ಷ್ಮೀ—ಬನ್ನಿ, ಎಲ್ಲರೂ ಗುರುಗಳ ಬಳಿ ಹೋಗೋಣ (ಮೂವರೂ ಹೋಗುವರು)

(ವರದಾರ್ಯನ ಮನೆ. ರಾಮಾನುಜರೂ ಅವರ ಶಿಷ್ಯರೂ ಕುಳಿತಿರುವರು. ಮೂವರು ಬಂದು ವಂದಿಸುವರು)

ರಾಮಾನುಜ—ನಿಮಗೆ ಭಗವಂತನು ಒಳ್ಳೆಯದನ್ನು ಮಾಡಲಿ

ವ್ಯಾಪಾರಿ—ಗುರುಗಳೇ ನನಗೆ ಶ್ರೀ ವೈಷ್ಣವ ದೀಕ್ಷೆ ದಯಪಾಲಿಸಿ, ಈ ಪಾಪಿಯನ್ನು ಮನ್ನಿಸಿ

ರಾಮಾನುಜ—ಏಳು, ಏಳು, ಆ ಪತಿವ್ರತಾ ಮಾತೆಯ ದೃಷ್ಟಿ ನಿನ್ನ ಮೇಲೆ ಬಿದ್ದಾಗಲೇ ನಿನ್ನ ಪಾಪ ಪರಿಹಾರವಾಯಿತು.

ವ್ಯಾಪಾರಿ—ಸ್ವಾಮಿ, ನನ್ನ ಧನಕನಕಾದಿ ವಸ್ತುಗಳನ್ನೆಲ್ಲಾ ನಿಮ್ಮ ಪಾದಾರವಿಂದದಲ್ಲಿ ಸಮರ್ಪಿಸುತ್ತೇನೆ. ನನಗೆ ಇದೊಂದೂ ಬೇಡ ನಿಮ್ಮ ಪಾದಸೇವೆಯಲ್ಲೇ ನನಗೆ ಮೋಕ್ಷ ದೊರಕಲಿ

ರಾಮಾನುಜ—ಆಗಲಿ, ವರದಾರ್ಯ, ಈ ವ್ಯಾಪಾರಿಯು ದಾನಮಾಡುವ ಐಶ್ವರ್ಯವನ್ನು ನೀವು ಪಡೆದು ಸುಖವಾಗಿರಿ.

ವರದಾರ್ಯ—ಆಚಾರ್ಯರೇ, ನನಗೆ ಯಾವ ಧನಕನಕ ವಸ್ತುವು ಬೇಡ. ನನಗೇನೂ ಕಡಿಮೆ ಇಲ್ಲ. ತಮ್ಮ ಪಾದಸೇವೆಯೇ ಸಾಕು.

ರಾಮಾನುಜ—ವರದಾರ್ಯ. ನಾವಿನ್ನು ಶ್ರೀ ಶೈಲಕ್ಕೆ ತೆರಳಿ, ನಂತರ ಕಾಶ್ಮೀರಕ್ಕೆ ಹೋಗಿ ಬೋಧಾಯನ ವೃತ್ತಿಯನ್ನು ತಂದು ಶ್ರೀಭಾಷ್ಯ ರಚನೆ ಮಾಡಬೇಕು. ನನ್ನ ಗುರುಗಳಿಗೆ ಕೊಟ್ಟ ವಚನವನ್ನು ಪಾಲಿಸಬೇಕು. ನಾವಿನ್ನು ಬರುತ್ತೇವೆ. ಭಾಗವತರೇ ಹೊರಡಿ.

ವರದಾರ್ಯ—(ಎಲ್ಲರೂ ನಮಸ್ಕರಿಸಿ) ತಮ್ಮ ಕೃಪಾ ಕಟಾಕ್ಷವು ಎಂದೆಂದೂ ನಮ್ಮ ಮೇಲೆ ಇರಲಿ. (ರಾಮಾನುಜರು ಆಶೀರ್ವಾದ ಮಾಡಿ ಎಲ್ಲರ ಜೊತೆ ಹೊರಡುವರು)

(ತೆರೆ ಬೀಳುವುದು)

## ದೃಶ್ಯ—೪

[ಯತಿರಾಜರ ಮಠ. ಯತಿರಾಜರು ಒಂದು ಪೀಠದಲ್ಲಿ ಕುಳಿತಿರುವರು. ಸುತ್ತಲೂ ಅವರ ಶಿಷ್ಯರೆಲ್ಲರೂ ಕುಳಿತಿರುವರು.]

ರಾಮಾನುಜ—ಯಾಮುನಾಚಾರ್ಯರಂತಹ ಗುರುಗಳು ಲಭಿಸುವುದು ಬಹಳ ದುರ್ಲಭವು. ಅವರ ವರದ ಹಸ್ತದಿಂದ ಆಶೀರ್ವಾದ ಪಡೆಯ ಬೇಕೆಂದು ಹೋದೆ. ಆದರೆ ಅದು ದುರ್ಲಭವಾಯಿತು. ಆದರೆ ಅವರ ಕರುಣೆ ನನ್ನ ಮೇಲೆ ಇದೆ. ಅವರು ನನಗೆ ಮೂರು ಆಜ್ಞೆಗಳನ್ನು ನೀಡಿದ್ದರು.

ದಾಶರಥಿ—ಅದೇ ಅವರ ಮೂರು ಬೆರಳುಗಳು ಮಡಿಸಿದ್ದವು. ತಮ್ಮ ಪ್ರತಿಜ್ಞೆಯ ನಂತರ ಅವು ಬಿಡಿಸಿಕೊಂಡವು.

ರಾಮಾನುಜ—ಅವರಿಗೆ ಇತ್ತ ಪ್ರತಿಜ್ಞೆಯಲ್ಲಿ ಒಂದೇನೋ ತಕ್ಕಮಟ್ಟಿಗೆ ಪ್ರಚಾರವಾಗುತ್ತಿದೆ.

ಒಬ್ಬ ಭಾಗವತ—ಅದು ಹೇಗೆ ?

ರಾಮಾನುಜ —ಮೋಕ್ಷ ಮಾರ್ಗದ ಬಾಗಿಲನ್ನು ತೆಗೆದು ಜನಜನಿತವಾಗುವಂತೆ ಮಾಡುವುದು.

ಮತ್ತೊಬ್ಬ ಶಿಷ್ಯ—ಎರಡನೆಯದು ?

ರಾಮಾನುಜ—ಶ್ರೀಭಾಷ್ಯ ಬರೆಯುವುದು. ಇನ್ನೂ ಅದರ ಕಾರ್ಯ ಪ್ರಾರಂಭವಾಗಲೇ ಇಲ್ಲ. ಇದಕ್ಕಾಗಿ ನಾನು ಕಾಶ್ಮೀರಕ್ಕೆ ಹೋಗಬೇಕು.

ಬೋಧಾಯನ ವೃತ್ತಿಯು ಕಾಶ್ಮೀರದಲ್ಲಿದೆ ಎಂದು ಕೇಳಿದೆ. ಅದಿಲ್ಲದೆ ಈ ಕೆಲಸ ನಡೆಯುವುದಿಲ್ಲ.

ಒಬ್ಬ ಶಿಷ್ಯ—ಹಾಗಾದರೆ ಈಗಲೇ ಎಲ್ಲರೂ ತೆರಳೋಣ.

ರಾಮಾನುಜ—ಬೇಡ, ಬೇಡ. ಎಲ್ಲರೂ ಹೋಗುವುದು ಬೇಡ ನಾನೂ ಕೂರೇಶನೂ ಹೋಗುವೆವು. ಕೂರೇಶರೇ ಹೊರಡುವಿರಾ ?

ಕೂರೇಶ—ಅದಕ್ಕೇನು ಗುರುಗಳೇ ! ನಾನು ಈಗಲೇ ಹೊರಟೆ (ಏಳುವರು)

ರಾಮಾನುಜ—ಭಾಗವತರೇ ನೀವೆಲ್ಲಾ ನಮ್ಮ ಕಾರ್ಯದಲ್ಲಿ ಯಶಸ್ಸು ದೊರೆಯಲೆಂದು ಭಗವಂತನಲ್ಲಿ ಪ್ರಾರ್ಥಿಸಿ, ನಾವಿಬ್ಬರೂ ಕಾಶ್ಮೀರಕ್ಕೆ ತೆರಳುತ್ತೇವೆ.

(ರಾಮಾನುಜರೂ ಕೂರೇಶರೂ ಹೊರಡುವರು. ಎಲ್ಲರೂ ಎದ್ದು ನಿಲ್ಲುವರು)

(ತೆರೆ ಬೀಳುವುದು)

## ದೃಶ್ಯ—೫

[ಕಾಶ್ಮೀರದ ಮಠ. ಅಲ್ಲಿ ಕೆಲವು ಪಂಡಿತರು ಕುಳಿತು ಮಾತಾಡುತ್ತಿರುವರು.]

ವಿದ್ಯಾಗರ್ವಿ—ನೋಡಿದೆಯಾ ಸುಗರ್ವಿ ! ಆ ದಕ್ಷಿಣ ದೇಶದಿಂದ ಇಬ್ಬರು ಪಂಡಿತರು ಬಂದಿದ್ದಾರಲ್ಲಾ ?

ಸುಗರ್ವಿ—ನೋಡಿದೆ.

ವಿದ್ಯಾಗರ್ವಿ—ಅವರು ಮೂರು ತಿಂಗಳಕಾಲ ನಡೆದೂ ನಡೆದೂ ಕಾಲನ್ನು ಸವೆಸಿ ಬಂದರಂತೆ.

ಸುಗರ್ವಿ—ಬರಲಿ ಅದಕ್ಕೇನು ?

ವಿದ್ಯಾಗರ್ವಿ—ಅವರು ಇಲ್ಲಿ ನಮ್ಮೊಡನೆ ಶಾಸ್ತ್ರಾರ್ಥ ಚರ್ಚಿಸಲು ಬಂದಿದ್ದಾರಂತೆ.

ಸುಗರ್ವಿ—ಹಾಗೇನು !

ವಿದ್ಯಾಗರ್ವಿ—ನಿನ್ನೆ ಆ ಮಠದಲ್ಲಿ ನಮ್ಮ ಪಂಡಿತರುಗಳ ಜೊತೆ ಎಷ್ಟು ಚೆನ್ನಾಗಿ ಶಾಸ್ತ್ರಾರ್ಥವನ್ನು ಚರ್ಚಿಸಿ ನಮ್ಮ ಮತವನ್ನು ಖಂಡಿಸಿದರು.

ಸುಗರ್ವಿ—ಹಾಗೆಯೋ ! ಹಾಗಾದರೆ ಅವರು ಘನಪಂಡಿತರೂ .. .. ಅನ್ನು ऽऽऽ॥

ವಿದ್ಯಾಗರ್ವಿ—ಪಾಂಡಿತ್ಯವೇನೋ ಸರಿ. ಆದರೆ ?

ಸುಗರ್ವಿ—ಏನು ಆದರೆ ?

ವಿದ್ಯಾಗರ್ವಿ—ಅವರು ವಿಶಿಷ್ಟಾದ್ವೈತಿಗಳಂತೆ ? ನಮ್ಮ ಅದ್ವೈತವನ್ನು ಹಾಳುಮಾಡಿ ಅಲ್ಲಿ ವಿಶಿಷ್ಟಾದ್ವೈತವನ್ನು ಸ್ಥಾಪಿಸುವರಂತೆ.

ಸುಗರ್ವಿ—ಅದು ಹೇಗೆ ಸಾಧ್ಯ ? ನಮ್ಮ ಆಚಾರ್ಯರಾದ ಶ್ರೀ ಶ್ರೀ ಶಂಕರಾಚಾರ್ಯರಿಗಿಂತಲೂ ಜ್ಞಾನಿಗಳೇ ?

ವಿದ್ಯಾಗರ್ವಿ—ಜ್ಞಾನಿಗಳೇನೋ ಅಹುದು. ನಮ್ಮ ಆಚಾರ್ಯರಾದಿಗಿಂತ ಜ್ಞಾನಿಗಳೋ ಅಲ್ಲವೋ ನನಗೆ ಗೊತ್ತಿಲ್ಲ. ಆದರೆ ಅದ್ವೈತದಂತಹ ಶ್ರೇಷ್ಠಮತಕ್ಕೆ ಕುಂದುಂಟಾದರೆ ?

ಸುಗರ್ವಿ—ಅದ್ವೈತಕ್ಕಿಂತಲೂ ಸುಲಭವಾಗಿದೆಯೋ ಅವರ ವೇದಾಂತ ? ನಮ್ಮ ಮತಕ್ಕೆ ಕುಂದುಂಟಾಗುವುದಕ್ಕೆ ?

ವಿದ್ಯಾಗರ್ವಿ—ಸುಲಭವಲ್ಲವೆಂದಲ್ಲ. ಇಲ್ಲಿ ಭಕ್ತಿಗೆ ಹೆಚ್ಚು ಪ್ರಾಧಾನ್ಯತೆ ಕೊಡುತ್ತಾರೆ

ಸುಗರ್ವಿ—ಆದ್ದರಿಂದಲೇ ಈ ಮತ ಬೇಗ ಬೆಳೆಯುತ್ತಿರುವುದು.

ವಿದ್ಯಾಗರ್ವಿ—ಅದಿರಲಿ, ಈಗ ಮತ್ತೊಂದು ವಿಚಾರ ?

ಸುಗರ್ವಿ—ಏನದು ಽ ಽ ಽ .

ವಿದ್ಯಾಗರ್ವಿ—ಅವರಿಗೆ ಬ್ರಹ್ಮಸೂತ್ರಕ್ಕೆ ಶ್ರೀಭಾಷ್ಯ ರಚಿಸಲು ಬೋಧಾಯನ ಮಹರ್ಷಿಗಳಿಂದ ರಚಿಸಿದ ಬೋಧಾಯನ ವೃತ್ತಿ ಬೇಕಂತೆ, ಅದಕ್ಕಾಗಿ ಅರಸಿ ಬಂದಿರುವರಂತೆ

ಸುಗರ್ವಿ—ಅದು ನಮ್ಮ ಪುಸ್ತಕಾಲಯದಲ್ಲಿ ಸುರಕ್ಷಿತವಾಗಿರುವುದಲ್ಲವೇ ? ಅದನ್ನು ಏನಾದರೂ ಕೊಡಕೂಡದು

ವಿದ್ಯಾಗರ್ವಿ—ಅದನ್ನು ಯಾರು ಕೊಡುತ್ತಾರೆ ? ಈಗಲೇ ಇಷ್ಟು ಮಾಡುತ್ತಾರೆ ಅದನ್ನೂ ಕೊಟ್ಟುಬಿಟ್ಟರೆ ನಮ್ಮ ಗತಿ ?

(ರಾಮಾನುಜರೂ ಕೂರೇಶರೂ ಬರುವರು. ಪಂಡಿತರುಗಳಿಗೆ ಕೈಮುಗಿದು)

ರಾಮಾನುಜ—ತಮಗೆ ವಂದಿಸುವೆವು.

ವಿದ್ಯಾಗರ್ವಿ—ತಾವು ಯಾರು ? ಏನು ವಿಶೇಷ ?

ರಾಮಾನುಜ—ಪೂಜ್ಯರೇ ನನ್ನನ್ನು ಯತಿರಾಜ ಎಂದೂ, ರಾಮಾನುಜಾ ಎಂದೂ ಕರೆಯುವರು. ಇವರು ನನ್ನ ಶಿಷ್ಯರಾದ ಕೂರೇಶರು.

ವಿದ್ಯಾಗರ್ವಿ—ನಮಸ್ಕಾರ (ಪೀಠವನ್ನು ತೋರಿಸಿ) ಈ ಪೀಠವನ್ನಲಂಕರಿಸಿರಿ (ಇಬ್ಬರೂ ಕುಳಿತುಕೊಳ್ಳುವರು) ತಾವೇಯೋ, ನಮ್ಮ ಆ ಮಠಕ್ಕೆ ಹೋಗಿ ನನ್ನ ಸಹೋದರರ ಜೊತೆ ವಾದಮಾಡಿದವರು ?

ರಾಮಾನುಜ—ಅಹುದು.

ವಿದ್ಯಾಗರ್ವಿ—ತಾವು ಏತಕ್ಕಾಗಿ ದಕ್ಷಿಣದಿಂದ ಇಷ್ಟುದೂರ ಬಂದಿರುವಿರಿ ?

ರಾಮಾನುಜ—ನಾವು ವಿಶಿಷ್ಟಾದ್ವೈತ ಪ್ರಚಾರಕ್ಕಾಗಿ ಬಂದಿರುವೆವು.

ವಿದ್ಯಾಗರ್ವಿ—ಕಾಶ್ಮೀರಕ್ಕೆ !

ರಾಮಾನುಜ—ಶಾರದಾಮಾತೆಯ ದರ್ಶನಕ್ಕಾಗಿ, ಬೋಧಾಯನ ವೃತ್ತಿ ನೋಡಲು

ವಿದ್ಯಾಗರ್ವಿ—(ಬೆಚ್ಚಿ) ಬೋಧಾಯನ ವೃತ್ತಿಗಾಗಿ !

ರಾಮಾನುಜ—ಅಹುದು, ಬೋಧಾಯನ ಮಹರ್ಷಿಗಳು ರಚಿಸಿರುವ ಬೋಧಾಯನ ವೃತ್ತಿಗಾಗಿ.

ವಿದ್ಯಾಗರ್ವಿ—ಅದು ಇತ್ತು, ಈಗ ಇಲ್ಲವಲ್ಲಾ ?

ರಾಮಾನುಜ—ಇಲ್ಲೇ ಸುರಕ್ಷಿತವಾಗಿ ಇಟ್ಟಿದೆ ಎಂದು ಕೇಳಿದೆ ?

ವಿದ್ಯಾಗರ್ವಿ—ಇತ್ತು, ಆದರೆ ಈಗ ಇಲ್ಲ.

ರಾಮಾನುಜ—ಏನಾಯಿತು ?

ಸುಗರ್ವಿ—ಅದು ಗೆದ್ದಲು ಹಿಡಿದು ಹೋಯಿತು

ರಾಮಾನುಜ—ಅಯ್ಯೋ . . ! ಶಾರದಾಮಾತೇ ! ಅಂತಹ ಅಮೂಲ್ಯ ಗ್ರಂಥ ಹಾಳಾಯಿತೆ ?

ವಿದ್ಯಾಗರ್ವಿ—ಹೌದು, ಹಾಳಾಯಿತು

ಸುಗರ್ವಿ—ಹಾಳಾಗೇ ಹೋಯಿತು ಇಲ್ಲಿ ಇಲ್ಲವೇ ಇಲ್ಲ.

ರಾಮಾನುಜ—ನಮ್ಮ ಶ್ರಮವೆಲ್ಲಾ ವ್ಯರ್ಥವಾಯಿತೆ ? ಕೂರೇಶ ! ನಾನಿನ್ನು ಶ್ರೀಭಾಷ್ಯವನ್ನು ಹೇಗೆ ಬರೆಯಲಿ ? ಗುರುಗಳಿಗೆ ಕೊಟ್ಟ ವಚನ ಹೇಗೆ ನಡೆಸಲಿ ?

ಕೂರೇಶ—ಗುರುಗಳ ಕೃಪೆ ಇದೆ ಚಿಂತಿಸಬೇಡಿ

ರಾಮಾನುಜ—ನಾವಿನ್ನು ಬರುತ್ತೇವೆ ನಿಮಗೆ ತೊಂದರೆ ಕೊಟ್ಟೆವು

ಸುಗರ್ವಿ—ಆಗಲಿ (ರಾಮಾನುಜ, ಕೂರೇಶರು ಹೋಗುವರು)

ವಿದ್ಯಾಗರ್ವಿ—ಆ ಸನ್ಯಾಸಿಗೆ ಹೇಗೆ ಕೈ ಕೊಟ್ಟೆ ನೋಡಿದೆಯಾ ?

ಸುಗರ್ವಿ—ಬಹಳ ಚೆನ್ನಾಗಿ ಮೋಸ ಹೋದ

ವಿದ್ಯಾಗರ್ವಿ—ಬನ್ನಿ, ನಮ್ಮ ಇತರ ಪಂಡಿತರಿಗೂ ಈ ವಿಚಾರವನ್ನು ತಿಳಿಸೋಣ. (ಇಬ್ಬರೂ ಹೋಗುವರು)

(ಕಾಶ್ಮೀರದ ಶಾರದಾಮಾತೆಯ ದೇವಸ್ಥಾನದ ಬೀದಿ ದೂರದಲ್ಲಿ ದೇವಸ್ಥಾನ ಕಾಣುವುದು ರಾಮಾನುಜರೂ, ಕೂರೇಶರೂ ವ್ಯಸನಾಕ್ರಾಂತರಾಗಿ ಬರುವರು)

ರಾಮಾನುಜ—ಈಗೇನು ಮಾಡುವುದು ಕೂರೇಶ ! ಶಾರದಾ ಪೀಠಕ್ಕೆ ಹೋಗಿ ಶಾರದಾಮಾತೆಯಲ್ಲಿ ಪ್ರಾರ್ಥಿಸೋಣ

ಕೂರೇಶ—ಬನ್ನಿ ಗುರುಗಳೇ ಹೋಗೋಣ (ಇಬ್ಬರೂ ಶಾರದಾಮಾತೆಯ ಮುಂದೆ ನಿಂತು ಪ್ರಾರ್ಥನೆ ಮಾಡುವರು)

ಶಾರದೆಯೆ ಕರಗಳ ಜೋಡಿಸಿ ।
ಭಕುತಿಯಿಂ ಬೇಡುವೆವಾವು ॥
ಹಂಸವಾಹಿನಿ ಬ್ರಹ್ಮನ ರಾಣಿ ।
ಕೈಯು ಜೋಡಿಸಿ ಬೇಡುವೆವಾವು ॥

ವಿದ್ಯಾದೀಶ್ವರಿ ವಿಧಿಪ್ರಾಣೇಶ್ವರಿ ।
ನಮಿಸುತ ಬೇಡುವೆವಾವು ॥
ಮಯೂರ ವಾಹನೆ ಮರಾಳಗಮನೆ ।
ಶಿರಬಾಗಿ ಬೇಡುವೆವಾವು ॥

ಪರಮಕರುಣಾ ಮೂರ್ತಿಯೆ ನೀನು ।
ಕೃಪೆ ತೋರೆಂದು ಬೇಡುವೆವಾವು ॥
ಪರಮದಯಾ ಶಾಲಿಯೆ ನೀನು ।
ದಯೆ ತೋರೆಂದು ಬೇಡುವೆವಾವು ॥

ವರದ ಹಸ್ತದಾಯಿನಿ ಎಂದು ।
ನಂಬಿ ಬಂದು ಬೇಡುವೆವಾವು ॥
ಬೋಧಾಯನ ಮಹರ್ಷಿ ರಚಿಸಿದ ।
ಬೋಧಾಯನ ವೃತ್ತಿ ನೀಡೌ ನೀನು ॥

(ರಾಮಾನುಜರು ಒಬ್ಬರೆ)

ಇಲ್ಲದೆ ಬೋಧಾಯನ ವೃತ್ತಿ ।
ರಚಿಸಲಾರೆ ಶ್ರೀ ಭಾಷ್ಯವ ನಾನು ॥
ವರಪ್ರದಾಯಿನಿ, ಭಕ್ತೋದ್ಧಾರಿಣಿ ।
ಭಕುತನುದ್ಧಾರವ ಮಾಡೌ ನೀನು ॥

(ಇಬ್ಬರೂ ಕೈಮುಗಿದು ಹಾಗೆ ಸ್ವಲ್ಪಹೊತ್ತು ನಿಲ್ಲುವರು.)

ಕೂರೇಶ—(ಕಣ್ಣುಬಿಟ್ಟು) ಗುರುಗಳೇ ಆ ಮಾತೆಯು ತೋರಿಸಿಯೇ ತೋರಿಸುವಳು.

(ಘಂಟಾನಾದವಾಗುವುದು ರಾಮಾನುಜರು ಆಲಿಸಿ)

ರಾಮಾನುಜ—ಕೂರೇಶ ಕೇಳಿದೆಯಾ ಘಂಟಾನಾದ! ಶುಭ ಸೂಚನೆಯು ಕಾಣು ತ್ತಿರುವುದು.

(ಹಾಗೆಯೇ ಸ್ವಲ್ಪಹೊತ್ತು ದೇವಿಯ ಮುಂದೆ ತಲ್ಲೀನರಾಗಿ ನಿಲ್ಲುವರು.)

ಕೂರೇಶ—ಗುರುಗಳೇ ನಾವಿನ್ನು ತೆರಳೋಣವೆ ?

ರಾಮಾನುಜ—ನಡೀ ಹೋಗೋಣ ದೇವರು ಬಿಟ್ಟಂತಾಗಲಿ.

(ಇಬ್ಬರೂ ಹೋಗುವರು)

(ರಾತ್ರಿ ಸಮಯ, ರಾಮಾನುಜರು ಮಲಗಿರುವರು. ಕೂರೇಶರೂ ಮಲಗಿರುವರು. ರಾಮಾನುಜರ ಮುಖದಲ್ಲಿ ಮಂದಹಾಸವು ಮೂಡುವುದು)

ರಾಮಾನುಜ—(ಕನವರಿಸುತ್ತಾ) ಭಗವತಿ ಶಾರದೆ! ಶಾರದಾಮಾತೆ ಕರುಣಿಸು. ನನ್ನ ವಚನವನ್ನುಳಿಸು. (ಇದ್ದಕ್ಕಿದ್ದಂತೆ ಪ್ರಕಾಶವಾಗುವುದು. ಶಾರದಾಮಾತೆ ಒಂದು ಬೃಹದಾಕಾರದ ಪುಸ್ತಕವನ್ನು ಕೈಯಲ್ಲಿ ಹಿಡಿದು ನಗುನಗುತ್ತಾ ಬರುವಳು)

ಶಾರದೆ—ರಾಮಾನುಜಾ, ರಾಮಾನುಜಾ,

ರಾಮಾನುಜ—ಯಾರು! ಯಾರು ನನ್ನನ್ನು ಕರೆಯುತ್ತಿರುವುದು?

ಶಾರದೆ—ನಾನು ಶಾರದೆ, ಏಕಿಂತು ಕನವರಿಸುತ್ತಿರುವೆ?

ರಾಮಾನುಜ—ಏನು ಮಾಡಲಿ? ಬೋಧಾಯನ ವೃತ್ತಿಯು ಸಿಕಲಿಲ್ಲವಲ್ಲಾ!

ಶಾರದೆ—ಏಕೆ ಬೇಕು?

ರಾಮಾನುಜ—ನನ್ನ ಗುರುಗಳಿಗೆ ಸೂತ್ರಭಾಷ್ಯ ಬರೆಯುವೆನೆಂದು ಮಾತು ಕೊಟ್ಟೆ. ಆದರೆ ನನಗೆ ಬೋಧಾಯನ ಸಿಕ್ಕಲಿಲ್ಲವಲ್ಲಾ?

ಶಾರದೆ—ಬೋಧಾಯನ ಏಕೆ?

ರಾಮಾನುಜ—ಹುಂ, ಬೇಕು.

ಶಾರದೆ—ಮಗು, ಈ ಗ್ರಂಥವನ್ನು ತೆಗೆದುಕೊ

ರಾಮಾನುಜ—ಹರ್ಷದಿಂದ ಕೊಡಿ, ಕೊಡಿ ಬೇಗ ಕೊಡಿ (ಎಂದು ಬೇಗ ತೆಗೆದು ಕೊಳ್ಳುವರು.

ಶಾರದೆ—ಮಗು ಬೇಗ ಈ ಗ್ರಂಥವನ್ನು ತೆಗೆದುಕೊಂಡು, ತಡಮಾಡದೆ ಈ ದೇಶವನ್ನು ಬಿಟ್ಟು ಹೊರಡು ಬೇಗ ಊರಿಗೆ ಹೋಗಿ ಸೇರಿಕೊ, ಈ ಪಂಡಿತರು ನಿನ್ನನ್ನು ಸುಮ್ಮನೆ ಬಿಡುವುದಿಲ್ಲ

ರಾಮಾನುಜ—ಆಗಲೀ ತಾಯಿ, ಹಾಗೆಯೇ ಮಾಡುವೆನು. (ಕಣ್ಣುಬಿಟ್ಟು ನೋಡು ವರು ಒಂದು ದಪ್ಪ ಪುಸ್ತಕ ಇರುವುದು ಅದನ್ನು ಕೈಗೆ ತೆಗೆದುಕೊಂಡು ನೋಡು

ರಾಮಾನುಜ—ಓ ಬೋಧಾಯನ, ಬೋಧಾಯನ! ತಾಯಿ ಶಾರದೆ, ನನ್ನ ಪ್ರತಿಜ್ಞೆ, ಪೂರೈಸಲು ಸಹಾಯ ಮಾಡಿದೆಯಾ? ನಾನು ಬೇಗ ನನ್ನ ಪ್ರತಿಜ್ಞೆ, ಪೂರೈಸುವೆನು, ಈಗಲೇ ಹೋಗುವೆನು (ಎಂದು ಪುಸ್ತಕ ಕಣ್ಣಿಗೆ ಒತ್ತಿಕೊಳ್ಳುವರು. ಕಣ್ಣಲ್ಲಿ ಧಾರಾಕಾರವಾಗಿ ಆನಂದಬಾಷ್ಪ ಹರಿಯುವುದು)

ರಾಮಾನುಜ—(ಕೂರೇಶನ ಬಳಿ ಹೋಗಿ) ಕೂರೇಶಾ ಕೂರೇಶಾ ಮಗು ಇಲ್ಲಿ ನೋಡು, ನನ್ನ ಕೈಯಲ್ಲಿ ಏನಿರುವುದು?

ಕೂರೇಶ—(ಚಟ್ಟನೆ ಎದ್ದು) ಏನಿರುವುದು?

ರಾಮಾನುಜ—ಬೋಧಾಯನ ಬೋಧಾಯನ ವೃತ್ತಿ.

ಕೂರೇಶ—ಹೇಗೆ ಸಿಕ್ಕಿತು?

ರಾಮಾನುಜ—ಮಾತೆ ಶಾರದಾದೇವಿಯು ತಂದುಕೊಟ್ಟು ಈಗಲೇ ಹೊರಡಲಿಕ್ಕೆ ಹೇಳಿರುವಳು.

ಕೂರೇಶ—ಹಾಗೇನು ?

ರಾಮಾನುಜ—ನಾವು ಈಗಲೇ ಈ ದೇಶ ಬಿಟ್ಟು ಹೋಗಬೇಕು. ಇಲ್ಲದಿದ್ದರೆ ಆ ಪಂಡಿತರುಗಳು ಸುಮ್ಮನೆ ಬಿಡುವುದಿಲ್ಲ ಕಿತ್ತುಕೊಂಡು ಬಿಡುವರು

ಕೂರೇಶ—ನಡೆಯಿರಿ ಗುರುಗಳೆ ಈಗಲೇ ಹೋಗುವ (ಇಬ್ಬರೂ ಹೋಗುವರು. ಮತ್ತೊಂದು ಕಡೆಯಿಂದ ವಿದ್ಯಾ ಗರ್ವಿ, ಸುಗರ್ವಿ ಬರುವರು)

ವಿದ್ಯಾಗರ್ವಿ—ಸುಗರ್ವಿ ಮೂರು ದಿನಗಳಿಂದ ಪುಸ್ತಕಾಲಯದ ಪುಸ್ತಕಗಳನ್ನು ಒದರಿ ಜೋಡಿಸಿ ಸಾಕಾಯ್ತು.

ಸುಗರ್ವಿ—ಈಗ ಏಕೆ ಪುಸ್ತಕಾಲಯದ ಪುಸ್ತಕಗಳನ್ನು ಒದರಿ ನೋಡಲು ಹೋದೆ ?

ವಿದ್ಯಾಗರ್ವಿ—ಪುಸ್ತಕಗಳೆಲ್ಲಾ ಸರಿಯಾಗಿವೆಯೋ ಇಲ್ಲವೋ ನೋಡೋಣ ಎಂದು.

ಸುಗರ್ವಿ—ಸರಿಯಾಗಿವೆಯೇ ?

ವಿದ್ಯಾಗರ್ವಿ—ಇಲ್ಲ

ಸುಗರ್ವಿ—ಯಾವ ಪುಸ್ತಕಗಳು ಇಲ್ಲ ?

ವಿದ್ಯಾಗರ್ವಿ—ಮುಖ್ಯವಾಗಿ ನಾವು ಯಾವ ಪುಸ್ತಕವನ್ನು ಬಹಳ ಸುರಕ್ಷಿತವಾಗಿಟ್ಟಿದ್ದೆವೋ ಆ ಪುಸ್ತಕವೇ ಇಲ್ಲ.

ಸುಗರ್ವಿ—ಅಂದರೆ !

ವಿದ್ಯಾಗರ್ವಿ—ಬೋಧಾಯನ ಗ್ರಂಥವೇ ಇಲ್ಲ !

ಸುಗರ್ವಿ—ಬೋಧಾಯನ ಇಲ್ಲವೆ !

ವಿದ್ಯಾಗರ್ವಿ—ಯಾರು ತೆಗೆದುಕೊಂಡಿರಬಹುದು ?

ಸುಗರ್ವಿ—ಆ ಪಂಡಿತರು ಬಂದಿದ್ದರಲ್ಲಾ ! ಅವರೇನಾದರೂ ತೆಗೆದುಕೊಂಡಿರಬಹುದೆ ?

ವಿದ್ಯಾಗರ್ವಿ—ಆ ಪಂಡಿತನೇ ತೆಗೆದುಕೊಂಡಿದ್ದಾನೆ. ಈಗ ಮೂರು ದಿನದಲ್ಲಿದ್ದ ಬೋಧಾಯನವು ಈಗೆಲ್ಲಿ ಹೋಗುತ್ತೆ ?

ಸುಗರ್ವಿ—ಅಹುದು ಅವರೇ ತೆಗೆದುಕೊಂಡಿರುತ್ತಾರೆ. ಬೇಗ ಬನ್ನಿ ಅವರಲ್ಲಿಗೆ ಹೋಗಿ ನೋಡುವ.

ವಿದ್ಯಾಗರ್ವಿ—ನಡಿಯಿರಿ, ಬೇಗ ನಡಿಯಿರಿ (ಇಬ್ಬರೂ ಹೋಗುವರು ಮರದ ಬಳಿ ಬಂದು) ಪಂಡಿತರೇ ! ಓ ಪಂಡಿತರೆ ! ಕೊಡಿ ನಮ್ಮ ಬೋಧಾಯನ ಗ್ರಂಥವನ್ನು (ಎಂದು ದೂರದಿಂದಲೇ ಆರ್ಭಟಿಸುವರು )

ಜಗರ್ವಿ—(ಒಬ್ಬ ಪಂಡಿತ ಒಳಗಿಂದ ಬಂದು) ಯಾವ ಪಂಡಿತರು ಬೇಕು ?

ವಿದ್ಯಾಗರ್ವಿ—ಜಗರ್ವಿಗಳೇ ಆ ಇಬ್ಬರು ಪಂಡಿತರು ಇಲ್ಲೇ ಇಳಿದುಕೊಂಡಿದ್ದರಲ್ಲವೆ ?

ಜಗರ್ವಿ—ಹೌದು,

ಸುಗರ್ವಿ—ಈಗ ಎಲ್ಲಿ ಅವರು ?

ಜಗರ್ವಿ—ಅವರು ಹೋಗಿ ಮೂರು ದಿನಗಳಾದುವು

ಇಬ್ಬರೂ—ಓ ಅವರೇ ಕಳ್ಳರು ನಮ್ಮ ಬೋಧಾಯನ ವೃತ್ತಿಯನ್ನು ಕದ್ದು ಓಡಿ ಹೋಗಿದ್ದಾರೆ

ಜಗರ್ವಿ—ಹಾಗೇನು ?

ಇಬ್ಬರೂ—ಬನ್ನಿ ಈಗ ಅವರನ್ನು ಹಿಂಬಾಲಿಸಿ ಹೋಗಿ ಹುಡುಕಿ ಆ ಪುಸ್ತಕವನ್ನು ಕಿತ್ತುತರಬೇಕು. (ಎಲ್ಲರೂ ಬೇಗ ಬೇಗ ಹೋಗುವರು)

ವಿದ್ಯಾಗರ್ವಿ—ಒಂದು ತಿಂಗಳಿಂದ ಎಷ್ಟು ವೇಗವಾಗಿ ಅಲೆದರೂ ಅವರು ಸಿಕ್ಕಲಿಲ್ಲವಲ್ಲಾ ಆ ಅಮೂಲ್ಯ ಗ್ರಂಥ ಹೋಯಿತಲ್ಲಾ !

ಸುಗರ್ವಿ—ಎಲ್ಲಿ ಹೋಗುತ್ತೆ ? ಏನಾದರೂ ಅವರು ಒಂದು ತಿಂಗಳಲ್ಲಿ ದಕ್ಷಿಣ ದೇಶಕ್ಕೆ ಹೋಗಿರುವುದಿಲ್ಲ, ಇಲ್ಲೇ ಎಲ್ಲೋ ಇರುತ್ತಾರೆ ಬನ್ನಿ ಇನ್ನೂ ಮುಂದೆ ಹೋಗಿ ಹುಡುಕುವ (ಎಲ್ಲರೂ ಹೋಗುವರು ಮತ್ತೊಂದು ಕಡೆಯಿಂದ ರಾಮಾನುಜರೂ ಕೂರೇಶರೂ ಬರುವರು.)

ರಾಮಾನುಜ—ಕೂರೇಶ ! ನಾವು ಎಷ್ಟೇ ಬೇಗ ಬೇಗ ಬಂದರೂ ಇನ್ನೂ ಬಹಳ ದೂರ ಹೋಗ ಬೇಕಾಗಿದೆಯಲ್ಲಾ ? ಅಷ್ಟರಲ್ಲಿ ಆ ಪಂಡಿತರು ಬಂದು ಬಿಟ್ಟರೆ ಏನು ಮಾಡುವುದು ?

ಕೂರೇಶ—ಭಗವತಿಯ ಕೃಪೆ ಇರುವವರೆಗೂ ಭಯವಿಲ್ಲ ಬನ್ನಿ ಮುಂದೆ ಹೋಗುವ (ಇಬ್ಬರೂ ಹೋಗುವರು ಮತ್ತೊಂದು ಕಡೆಯಿಂದ ಸುಗರ್ವಿ ವಿದ್ಯಾಗರ್ವಿ ಬರುವರು)

ಸುಗರ್ವಿ—(ನಾಲ್ಕು ಕಡೆಯೂ ನೋಡಿ) ಎಲ್ಲೂ ಕಾಣುತ್ತಿಲ್ಲವಲ್ಲಾ ! ಇಷ್ಟು ಬೇಗ ಎಷ್ಟು ದೂರ ಹೋಗಿರಬಹುದು ?

ವಿದ್ಯಾಗರ್ವಿ—(ದೂರದಲ್ಲಿ ನೋಡಿ) ಅಗೋ ಅಲ್ಲಿ ನೋಡು ! ಅಲ್ಲಿ ಯಾರೋ ಇಬ್ಬರು ಹೋಗುವಂತಿದೆ

ಸುಗರ್ವಿ—ಬೇಗ ಬನ್ನಿ, ಬೇಗ ಬನ್ನಿ, ಹೋಗಿ ನೋಡೋಣ (ಇಬ್ಬರೂ ಬೇಗ ಬೇಗ ಹೋಗುವರು)

(ಮತ್ತೊಂದು ಕಡೆಯಿಂದ ರಾಮಾನುಜರೂ ಕೂರೇಶರೂ ಬರುವರು)

ರಾಮಾನುಜ—ಕೂರೇಶ ಈ ಮರದಡಿಯಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳೋಣ

ಕೂರೇಶ—ಆಗಲಿ. ಗುರುಗಳೇ ! ಇಬ್ಬರೂ ಕುಳಿತುಕೊಳ್ಳುವರು ರಾಮಾನುಜರು ಪುಸ್ತಕವನ್ನು ಭದ್ರವಾಗಿ ಮಡಿಲಲ್ಲಿ ಇಟ್ಟುಕೊಳ್ಳುವರು ವಿದ್ಯಾಗರ್ವಿ ಮೊದಲಾದವರು ಓಡೋಡಿ ಬರುವರು )

ವಿದ್ಯಾಗರ್ವಿ—ಸಿಕ್ಕಿದರು ಆ ಪಂಡಿತರು ಅಲ್ಲಿ ನೋಡು ಕುಳಿತಿರುವರು

ಸುಗರ್ವಿ—ಹೌದು, ಅವರೇ! ಅವರೇ! ಸಧ್ಯ ಸಿಕ್ಕಿದರಲ್ಲಾ! (ಇಬ್ಬರೂ ಹತ್ತಿರ ಬಂದು) ಪಂಡಿತರೇ. ಓ ಪಂಡಿತರೇ! ಎಲ್ಲಿ ನಮ್ಮ ಪುಸ್ತಕ? ಆ ಬೋಧಾಯನ ವೃತ್ತಿ?

ವಿದ್ಯಾಗರ್ವಿ—ಕದ್ದು, ಓಡಿ ಬಂದಿರುವಿರಾ? ಕೊಡಿ ನಮ್ಮ ಪುಸ್ತಕ.

ರಾಮಾನುಜ—ಕೂರೇಶ! ಈಗ ಏನು ಮಾಡುವುದು? ಬಂದೇ ಬಿಟ್ಟರಲ್ಲಾ!

ಕೂರೇಶ—ಚಿಂತಿಸಬೇಡಿ ಗುರುಗಳೇ (ಅಷ್ಟರಲ್ಲೇ ರಾಮಾನುಜರ ಕೈಯಿಂದ ವಿದ್ಯಾಗರ್ವಿ ಪುಸ್ತಕ ಕಿತ್ತುಕೊಳ್ಳುವನು. ರಾಮಾನುಜರು ಪೆಚ್ಚುಮುಖ ಮಾಡಿಕೊಂಡು ನೋಡುತ್ತಿರುವರು)

ವಿದ್ಯಾಗರ್ವಿ—ಸಧ್ಯ ನಾವು ಬಂದುದು ಸಾರ್ಥಕವಾಯಿತಲ್ಲಾ! ನಡಿಯಿರಿ ಸುಗರ್ವಿ. ಜಗರ್ವಿಗಳೇ ಹೋಗೋಣ (ಎಲ್ಲರೂ ಸಂತೋಷದಿಂದ ಹೋಗುವರು)

ರಾಮಾನುಜ—ಕೂರೇಶ, ಈಗೇನು ಮಾಡುವುದು? ಶಾರದಾಮಾತೆಯು ಕರುಣಿಸಿದ ಪುಸ್ತಕವನ್ನು ಆ ಪಂಡಿತರು ತೆಗೆದುಕೊಂಡು ಬಿಟ್ಟರಲ್ಲಾ? ನಾವು ಕಾಶ್ಮೀರದಿಂದ ಇಷ್ಟು ಕಷ್ಟಪಟ್ಟು ತಂದ ಪುಸ್ತಕ ಇಲ್ಲದೇ ಹೋಯಿತಲ್ಲಾ! ಹೇಗೆ ನನ್ನ ಪ್ರತಿಜ್ಞೆಯನ್ನು ಪೂರೈಸಲಿ? (ಚಿಂತಾಕ್ರಾಂತರಾಗಿ ದುಃಖಿಸುವರು)

ಕೂರೇಶ—ಚಿಂತಿಸಬೇಡಿ, ಆ ಮಾತೆಯ ಕರುಣೆಯಿಂದ ನನಗೆ ಅದು ಹೃದ್ಗತವಾಗಿರುವುದು

ರಾಮಾನುಜ—ಅದು ಹೇಗೆ?

ಕೂರೇಶ—ನನಗೆ ಮೊದಲೇ ಅನುಮಾನವಿತ್ತು ಆ ಪಂಡಿತರು ನಮ್ಮ ಬಳಿ ಈ ಗ್ರಂಥವನ್ನು ಬಿಡುವುದಿಲ್ಲಾ ಎಂದು.

ರಾಮಾನುಜ—ಅದಕ್ಕೇನು ಮಾಡಿದೆ?

ಕೂರೇಶ—ತಾವು ರಾತ್ರಿ ವಿಶ್ರಾಂತಿ ತೆಗೆದುಕೊಳ್ಳುವಾಗ ನಾನು ರಾತ್ರಿಯಲ್ಲಿ ಆ ಗ್ರಂಥವನ್ನೆಲ್ಲಾ ಓದಿದೆ,

ರಾಮಾನುಜ—ನೀನೇ ಧನ್ಯ! ನಾನು ಒಂದು ಸಲವಾದರೂ ಒಂದು ಹಾಳೆಯನ್ನೂ ಮಗುಚಲಿಲ್ಲವಲ್ಲಾ?

ಕೂರೇಶ—ದುಃಖಿಸಬೇಡಿ ಗುರುಗಳೇ, ನನಗೆ ಆ ಗ್ರಂಥದ ಅಕ್ಷರ ಅಕ್ಷರವೂ ತಮ್ಮ ಅನುಗ್ರಹದಿಂದ ನೆನಪಿರುವುದು

ರಾಮಾನುಜ—ಹಾಗೇನು! ನಿನಗೆ ನೆನಪಿರುವುದೇ! ನಾನು ಕೃತಾರ್ಥನಾದೆ.

ಕೂರೇಶ—ತಾವು ಅನುಗ್ರಹಿಸಿದರೆ ಮೂರು ದಿನಗಳಲ್ಲಿ ಆ ಗ್ರಂಥವನ್ನು ಹೇಗಿತ್ತೋ ಹಾಗೆ ರಚಿಸಿಕೊಡುವೆ

ರಾಮಾನುಜ—(ಬಹಳ ಸಂತೋಷದಿಂದ ಆಲಂಗಿಸಿಕೊಂಡು) ಕೂರೇಶ ನೀನು ಶತಾಯುವಾಗು ನೀನು ದೇವತಾ ಪುರುಷ ನಿನ್ನಲ್ಲಿ ದೈವೀಕಶಕ್ತಿ ಇದೆ.

ಕಳೆದುಹೋದ ಅಮೂಲ್ಯನಿಧಿಯನ್ನು ಪುನಃ ತಂದುಕೊಟ್ಟೆ. ಎಂದೆಂದಿಗೂ ನಾನು ನಿನಗೆ ಕೃತಜ್ಞ. ನಿನ್ನ ದೈವೀಕಶಕ್ತಿ ಅಮರವಾದುದು. ನೀನು ಹೋಗಿ ರಚಿಸಲು ಪ್ರಾರಂಭಮಾಡು

ಕೂರೇಶ—(ನಮಸ್ಕರಿಸಿ) ಅನುಗ್ರಹಿಸಿ ಗುರುಗಳೆ ನಾನು ಹೋಗುವೆನು

ರಾಮಾನುಜ—ಶುಭಮಸ್ತು, ಕಾರ್ಯಸಿದ್ಧಿರಸ್ತು (ಎರಡೂ ಕೈಯನ್ನು ಕೂರೇಶರ ತಲೆಯ ಮೇಲಿಟ್ಟು ಆಶೀರ್ವದಿಸುವರು. ಕೂರೇಶರು ಹೋಗುವರು. ರಾಮಾನುಜರು ಮತ್ತೊಂದು ಕಡೆಗೆ ಹೋಗುವರು)

(ಒಂದು ಗ್ರಾಮ ಅಲ್ಲಿ ಒಂದು ಸಾಧಾರಣ ಮನೆ ಹಜಾರದಲ್ಲಿ ಕೂರೇಶರು ಕುಳಿತು ಬರೆಯುತ್ತಿರುವರು ರಾಮಾನುಜರು ಬರುವರು)

ರಾಮಾನುಜ—ಆಹಾ! ಕೂರೇಶರು ಎಷ್ಟು ತಲ್ಲೀನತೆಯಿಂದ ಬರೆಯುತ್ತಿರುವರು. ಎರಡು ದಿನಗಳಿಂದ ಅನ್ನಾಹಾರ, ನಿದ್ರೆಗಳಿಲ್ಲದೆ ಒಂದೇ ಸಮನೆ ಬರೆಯುತ್ತಿರುವರು ಓ ಶಾರದೆ ಅವರಿಗೆ ಬರೆಯುವ ಶಕ್ತಿಯನ್ನು ನೀಡು (ಹೋಗುವರು)

ರಾಮಾನುಜ—(ಕುಳಿತು ಏನನ್ನೋ ಯೋಚಿಸುತ್ತಾ ಪುಸ್ತಕ ನೋಡುತ್ತಿರುವರು) ಇಂದಿಗೆ ಮೂರು ದಿನಗಳಾದವು ಕೂರೇಶ ಅವನ ಮಾತಿನ ಪ್ರಕಾರ ಇಷ್ಟು ಹೊತ್ತಿಗೆ ಪುಸ್ತಕ ಬರೆದು ಮುಗಿಸಿರಬಹುದು ಕಾದು ನೋಡುವೆನು (ಪುನಃ ಓದುತ್ತಾ ಕುಳಿತುಕೊಳ್ಳುವರು ಕೂರೇಶರು ಒಂದು ದಪ್ಪ ಪುಸ್ತಕ ಹೊತ್ತು, ಬರುವರು)

ಕೂರೇಶ—ಗುರುಗಳೇ ತಮ್ಮ ಆಶೀರ್ವಾದದಿಂದ ಇಂದು ಈ ಉದ್ಗ್ರಂಥವು ಪೂರ್ಣವಾಯಿತು. ತೆಗೆದುಕೊಳ್ಳಿ (ಪದತಳದಲ್ಲಿಟ್ಟು ನಮಸ್ಕರಿಸುವರು)

ರಾಮಾನುಜ—ಏಳು ಮಗು, ಏಳು, ಕೂರೇಶ ನಾನು ನಿನಗೆ ಎಂದೆಂದಿಗೂ ಕೃತಜ್ಞ. (ಪುಸ್ತಕವನ್ನು ತೆಗೆದುಕೊಂಡು ಕಣ್ಣಿಗೆ ಒತ್ತಿಕೊಳ್ಳುವರು)

ಕೂರೇಶ—ಹಾಗೆ ಹೇಳಬೇಡಿ ಗುರುಗಳೆ! ಇಲ್ಲಿ ನನ್ನದೇನಿದೆ? ಎಲ್ಲಾ ತಮ್ಮ ಅನುಗ್ರಹ

ರಾಮಾನುಜ—ನಾನಿನ್ನು ಬೇಗ ಶ್ರೀರಂಗಕ್ಕೆ ಹೋಗಿ ಸೂತ್ರಭಾಷ್ಯ ರಚನೆ ಮಾಡೋಣ ಬನ್ನಿ ಹೋಗೋಣ ತಮ್ಮಿಂದ ನನಗೆ ಬೋಧಾಯನವೃತ್ತಿ ದೊರೆಯಿತು ಈಗ ನಾವು ಭಕ್ತಿ, ಧ್ಯಾನ ಮತ್ತು ಉಪಾಸನೆಯ ಮೂಲಕವೇ ಮೋಕ್ಷ ಲಭಿಸುತ್ತೆ ಎಂದು ವೇದವೇದಾಂತಗಳು ಸಾರಿವೆ ಎಂಬುದನ್ನು ಶ್ರೀಭಾಷ್ಯ ರಚಿಸಿ ಅದರ ಮೂಲಕ ಸಾಧಿಸಬಹುದು.

ಕೂರೇಶ—ಆಗಲಿ ಗುರುಗಳೆ, ನಡಿಯಿರಿ ಹೋಗೋಣ.

(ಇಬ್ಬರೂ ತೆರಳುವರು ತೆರೆ ಬೀಳುವುದು)

## ದೃಶ್ಯ—೫

[ಶ್ರೀರಂಗದಲ್ಲಿ ರಾಮಾನುಜರ ಮಠ ಕೃಷ್ಣಾಜಿನದ ಮೇಲೆ ರಾಮಾನುಜರು ಕುಳಿತಿರುವರು. ಮುಂದೆ ಒಂದು ಪೀಠ ಇರುವುದು ಅದರ ಮೇಲೆ ಒಂದು ದೊಡ್ಡ ಗ್ರಂಥವಿರುವುದು. ಎದುರಿಗೆ ಕೂರೇಶರು ಒಂದು ಪೀಠದ ಮುಂದೆ ಕುಳಿತಿರುವರು. ಕೈಯಲ್ಲಿ ಲೇಖನಿ ಹಿಡಿದಿರುವರು ಅವರ ಮುಂದೆ ಕಾಗದದ ಕಟ್ಟು ಇರುವುದು.]

ರಾಮಾನುಜ—ಶುಕ್ಲಾಂಭರದರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್, ಸರ್ವವಿಘ್ನೋಪಶಾಂತಯೆ ॥

(ಭಕ್ತಿಯಿಂದ ಭಗವಂತನ ಧ್ಯಾನ ಮಾಡುವರು ಕೂರೇಶರೂ ಕಣ್ಣು ಮುಚ್ಚಿ ಭಗವಧ್ಯಾನದಲ್ಲಿ ನಿರತರಾಗುವರು)

ರಾಮಾನುಜ—(ಕಣ್ಣು ತೆರೆದು) ಕೂರೇಶರೇ ಸಿದ್ಧವಾಗಿದ್ದೀರಾ ? ಬರೆಯಲು ಪ್ರಾರಂಭಿಸೋಣವೆ ?

ಕೂರೇಶ—ಆಗಲಿ, ಗುರುಗಳೇ, ಸಿದ್ಧನಾಗಿದ್ದೇನೆ

ರಾಮಾನುಜ—ನಾನು ಹೇಳುವುದನ್ನೆಲ್ಲಾ ನೀವು ಬರೆಯುತ್ತಾ ಹೋಗಿ ನಿಮಗೆ ಏನಾದರೂ ಸಂದೇಹ ಬಂದರೆ, ತಪ್ಪು ಕಂಡರೆ ತಕ್ಷಣ ನಿಲ್ಲಿಸಿ ಬಿಡಿ

ಕೂರೇಶ—ಹಾಗೆಯೇ ಮಾಡುವೆನು

ರಾಮಾನುಜ—ಇದರಿಂದ ನಾನು ನನ್ನ ಅಭಿಪ್ರಾಯವನ್ನು ತಿದ್ದಿಕೊಳ್ಳಲು ಅವಕಾಶ ವಾಗುವುದು, ಮತ್ತು ಗ್ರಂಥ ರಚನೆ ಸರಿಯಾಗಿಯೂ ಆಗುವುದು. ಈಗ ಶ್ರೀಭಾಷ್ಯದ ಮಂಗಳ ಶ್ಲೋಕ ಬರೆಯಿರಿ

ಅಖಿಲಭುವನಜನ್ಮಸ್ತೋಮ ಭಂಗಾದಿಲೀಲೆ ।
ವಿನತ ವಿವಿಧವ್ರಾಕ ರಕ್ಷೈಕ ದೀಕ್ಷೆ ॥
ಶ್ರುತಿ ಶಿರಸಿವಿದೀಪ್ತ ಬ್ರಹ್ಮಣಿ ಶ್ರೀನಿವಾಸೆ ।
ಭವತು ಮಮ ಪರಸ್ಮಿನ್ ಶೇಮುಷೀ ಭಕ್ತಿರೂಪ ॥

(ಇದೇ ರೀತಿ ಶ್ರೀ ಭಾಷ್ಯದ ವಿಚಾರ ರಾಮಾನುಜರು ಹೇಳುತ್ತಾ ಹೋಗುವರು, ಕೂರೇಶರು ಬರಯುತ್ತಾ ಹೋಗುವರು ಒಂದು ಬಾರಿ ಜೀವಿಯ ನೈಜ ಸ್ವಭಾವವನ್ನು ವಿವರಿಸಿ ಹೇಳುತ್ತಿದಾಗ)

ರಾಮಾನುಜ—ಕೂರೇಶ ಬರಿ, ಜೀವಿಯ ನೈಜ ಸ್ವಭಾವವು ಹೀಗಿರುವುದು. ಜೀವಾತ್ಮನು ಶಾಶ್ವತನೂ ಸ್ವತಃ ಜ್ಞಾನಿಯೂ ಆಗಿದ್ದಾನೆ. ಅಂದರೆ ನಿತ್ಯತ್ವವೂ, ಜ್ಞಾನತ್ವವೂ ಗಳಿಸಿದ್ದರೆ ಜೀವಾತ್ಮನೆಂದು ಗುರುತಿಸ ಬಹುದು



ಶ್ರೀ ರಾಮಾನುಜರು, ಕೂರೇಶರು ಪೂಜೆಮಾಡುತ್ತಿರುವುದು

ಕೂರೇಶ —(ಸುಮ್ಮನೆ ಕುಳಿತಿರುವರು.)

ರಾಮಾನುಜ—ಬರೀ ಕೂರೇಶ. ಯಾಕೆ ಸುಮ್ಮನೆ ಕುಳಿತಿರುವೆ ? ಇದರಲ್ಲಿ ಯಾವ ತಪ್ಪೂ ಇಲ್ಲ.

ಕೂರೇಶ —(ಸುಮ್ಮನೇ ಕುಳಿತಿರುವರು.)

ರಾಮಾನುಜ—ಏಕೆ ಸುಮ್ಮನೆ ಕುಳಿತಿರುವಿರಿ ? ಹಾಗಾದರೆ ನೀವೇ ಬರೆಯುವುದು ಉತ್ತಮ.

ಕೂರೇಶ—(ಸುಮ್ಮನೇ ಕುಳಿತಿರುವರು )

ರಾಮಾನುಜ—(ಸ್ವತಃ) ಕೂರೇಶರು ಏಕೆ ಹೀಗೆ ಕುಳಿತಿರುವರು ? ಇದರಲ್ಲಿ ಏನೋ ಇರಬೇಕು. ಇನ್ನೊಂದು ಸಲ ಯೋಚಿಸಿ ನೋಡುತ್ತೇನೆ — ಜೀವಾತ್ಮನೇ ಸ್ವಭಾವತಃ ನಿತ್ಯನಾದರೆ ಜ್ಞಾತೃವೂ ಅಹುದಾದರೆ ಅವನು ಸ್ವತಂತ್ರನಾಗಿಯೇ ದೇಹ ಜ್ಞಾನವನ್ನು ಪಡೆದು ಸುಖದುಃಖಗಳನ್ನು ಅನುಭವಿಸುವನೆಂದು ಹೇಳಬೇಕಾಗುತ್ತದೆ. ಆದರೆ ಭಗವದ್ಗೀತೆಯಲ್ಲಿ 'ಈ ಜೀವಲೋಕದಲ್ಲಿ ನನ್ನ ಅಂಶದಿಂದಲೇ ಸನಾತನವಾದ ಜೀವಾತ್ಮನಾಗಿ', ಎಂದು ಹೇಳಿದೆಯಲ್ಲಾ ? ಆದ್ದರಿಂದ ಜೀವಾತ್ಮನು ಅಂಶೀಭೂತನೆ ವಿನಃ ಎಂದಿಗೂ ಸ್ವತಂತ್ರನಲ್ಲ. ಆದರ ಚಲನವಲನವೆಲ್ಲಾ ಭಗವಂತನಿಂದ ನಿರ್ದೇಶಿಸಲ್ಪಟ್ಟಿದ್ದು ಇದು ಸರಿ ಕೂರೇಶಾ ಕೂರೇಶಾ, ಈಗಲಾದರೂ ಬರೆಯುವಿರಾ ?

ಕೂರೇಶ—ಆಗಲಿ, ಗುರುಗಳೆ

ರಾಮಾನುಜ—ಜೀವಿಯ ನೈಜ ಸ್ವಭಾವ ಹೀಗಿರುವುದು ಜೀವಿಯ ಆತ್ಮದಲ್ಲಿ ಪರಮಾತ್ಮನು ಕುಳಿತಿರುವುದರಿಂದ ಎಂದೆಂದಿಗೂ ಜೀವಾತ್ಮನು ಶೇಷಿ ಭೂತನಾಗಿಯೇ ಇರುವನು. ಆದ್ದರಿಂದ ಜೀವಿಯು 'ಶೇಷಿ', 'ಅಂಶಿ', ಯಜಮಾನನಿಗೆ ತನ್ನ ಸ್ವತ್ತಿನ ಮೇಲೆ ಎಷ್ಟು ಅಧಿಕಾರ ವಿದೆಯೋ ಅಷ್ಟು ಅಧಿಕಾರ ಪರಮಾತ್ಮನಿಗೆ ಜೀವಿಯ ಮೇಲಿದೆ. ಜೀವಿ ಮತ್ತು ಪರಮಾತ್ಮನ ಸಂಬಂಧವು ಸ್ವಾಮಿ ಸ್ವತ್ತಿನ ಸಂಬಂಧದ ಹಾಗೆ (ಕೂರೇಶರು ಬರೆಯುತ್ತಾ ಹೋಗುವರು ರಾಮಾನುಜರು ಹೇಳುತ್ತಿರುವರು )

ಕೂರೇಶ—ಗುರುಗಳೇ ಇಲ್ಲಿಗೆ ಶ್ರೀ ಭಾಷ್ಯ ಗ್ರಂಥವು ಪೂರ್ಣವಾಯಿತಲ್ಲವೆ ?

ರಾಮಾನುಜ—ಇಂದು ಶ್ರೀ ಭಾಷ್ಯ ಗ್ರಂಥವು ಪೂರ್ಣಗೊಂಡಿತು. ನನ್ನ ಆಚಾರ್ಯರಿಗೆ ಕೊಟ್ಟ ಎರಡನೇ ಮಾತು ಪೂರೈಸಿತು ಇಂದು ನನ್ನ ಮೂರನೇ ಎರಡು ಭಾಗ ಕರ್ತವ್ಯವು ಮುಗಿಯಿತು. ಕೂರೇಶ ಬಾ-

ಈಗ ವಿಶ್ರಾಂತಿ ಪಡೆಯೋಣ. ನೀನೂ ಬರೆದೂ ಬರೆದೂ ಸುಸ್ತಾಗಿರುವೆ.

(ಇಬ್ಬರೂ ತೆರಳುವರು)

(ತೆರೆ ಬೀಳುವುದು)

# ಅಂಕ — ೫

## ದೃಶ್ಯ — ೧

[ಸ್ಥಳ ಚಿದಂಬರ. ಚೋಳರಾಜನ ಅರಮನೆ. ಅನೇಕ ಉಪ್ಪರಿಗೆಗಳಿಂದ ಕೂಡಿದ ಭವ್ಯವಾದ ಕಟ್ಟಡ. ಚೋಳರಾಜನ ಸಭಾಂಗಣದಲ್ಲಿ ಚೋಳರಾಜನ ಆಸ್ಥಾನ ನೆರೆದಿರುವುದು. ವಿಶಾಲವಾದ ಭವ್ಯವಾದ ಪ್ರಾಂಗಣ ಗೋಡೆಯ ಲೆಲ್ಲಾ ದಂತದ ಚಿತ್ರಕಲೆ ಇರುವುದು, ನುರಿತ ಶಿಲ್ಪಿಗಳಿಂದ ನಿರ್ಮಿಸಿದ ಭವ್ಯವಾದ ನಟನಟಿಯರ, ನರ್ತಕಿಯರ ಚಿತ್ರ ಕೆತ್ತಿರುವುದು. ಒಂದು ಕಡೆ ಮಂತ್ರಿಗಳೂ, ವಂದಿಮಾಗಧರೂ, ಸೇನಾಧಿಪತಿಗಳೂ, ಸಭಾಸದರೂ ತಮ್ಮ ತಮ್ಮ ಆಸನದಲ್ಲಿ ಆಸೀನರಾಗಿರುವರು ಮತ್ತೊಂದು ಕಡೆಯಲ್ಲಿ ವಿದ್ವಾಂಸರೂ, ಸಂಗೀತಗಾರರೂ, ವಾಗ್ಗೇಯಕಾರರೂ, ಉತ್ತಮವಾಗ್ಮಿಗಳೂ, ಸಾಹಿತಿಗಳೂ, ಪಂಡಿತೋತ್ತಮರೂ ಆಸೀನರಾಗಿರುವರು ಸ್ವಲ್ಪ ದೂರದಲ್ಲಿ ಚೋಳರಾಜನ ಶೈವಗುರುಗಳು ವಿರಾಜಿಸುತ್ತಿರುವರು ಎಲ್ಲರೂ ಆಸ್ಥಾನ ಪೋಷಾಕನ್ನು ಧರಿಸಿರುವರು, ಮಧ್ಯೆ ನವರತ್ನ ಖಚಿತವಾದ ಸಿಂಹಾಸನವಿರುವುದು ವಂದಿ ಮಾಗಧರು ಹೊಗಳುತ್ತಿರುವರು. ಹೃಷ್ಟಪುಷ್ಟವಾದ ಮೈಕಟ್ಟು, ಗೌರವರ್ಣ, ಎತ್ತರವಾದ ಆಕೃತಿ, ವಿಶಾಲವಾದ ಉಬ್ಬಿದ ಹಣೆ, ತಾವರೆಯಂತೆ ಕಣ್ಣು, ದೊಡ್ಡ ಕಿವಿಗಳು, ಚೂಪಾದ ನಾಸಿಕ, ಕಿರು ಬಾಯಿ, ಚಿಗುರು ಮೀಸೆಯನ್ನು ಹೊತ್ತ ಚೋಳರಾಜನು ಅಂಗರಕ್ಷಕರೊಡನೆ ಬರುವನು )

ವಂದಿಮಾಗಧರು—ರಾಜಾಧಿರಾಜ ಚೋಳರಾಜರಿಗೆ ಪರಾಕ್, ಶೈವ ಭಕ್ತಾಗ್ರಣಿ ಶ್ರೀ ರಾಜಾಧಿರಾಜ ಚೋಳರಾಜರಿಗೆ ಬಹು ಪರಾಕ್, ಬಹು ಪರಾಕ್. ಎಚ್ಚರಿಕೆ! ಮಹಾರಾಜರು ಆಗಮಿಸುತ್ತಿರುವರು. (ರಾಜನು ಅಂಗರಕ್ಷಕರ ಜೊತೆ ಬರುವನು. ಎಲ್ಲರೂ ಎದ್ದು ನಿಲ್ಲುವರು. ರಾಜನು ಸಿಂಹಾಸನದ ಮೇಲೆ ವಿರಾಜಿಸುವನು. ಎಲ್ಲರೂ ಕುಳಿತುಕೊಳ್ಳುವರು.)

ಚೋಳರಾಜ—ಮಂತ್ರಿಗಳೇ ನಮ್ಮ ರಾಜ್ಯದಲ್ಲಿ ಪ್ರಜೆಗಳು ಸುಖವಾಗಿರುವರೆ ?

ಮಂತ್ರಿ—ಮಹಾಪ್ರಭುಗಳೇ, ಪ್ರಜೆಗಳು ಸುಖಿಯಾಗಿರುವರು.

ರಾಜ—ನಮ್ಮ ಶೈವ ಮತದ ಪ್ರಚಾರ ಹೇಗೆ ನಡೆಯುತ್ತಿರುವುದು ?

ಮಂತ್ರಿ—ಅದಕ್ಕೆ ಈಗ ತಡೆಯುಂಟಾಗಿರುವುದು.

ರಾಜ—ಏಕೆ ? ಯಾರಿಂದ ಅಡ್ಡಿ ಉಂಟಾಗಿರುವುದು !

ಶೈವ ಗುರುಗಳು—ಪ್ರಭುಗಳೇ ಇಲ್ಲಿಗೆ ವಿಷ್ಣು ಭಕ್ತ ಎಂದು ಹೇಳಿಕೊಳ್ಳುವ ಒಬ್ಬ ಸನ್ಯಾಸಿ ಬಂದಿರುವನು.

ರಾಜ—ಬಂದಿದ್ದರೆ ನಮಗೇನು ?

ಒಬ್ಬ ಸಭಾಸದ—ಪ್ರಭುಗಳೇ ಅವನ ಹೆಸರು ರಾಮಾನುಜನಂತೆ.

ರಾಜ—ಅವನು ಎಂತಹವನಾದರೆ ನಮಗೇನು ? ಅವನ ಹೆಸರೇನಾದರೇನು ? ನಮ್ಮ ಶೈವ ಮತ ಪ್ರಚಾರಕ್ಕೆ ಏನಡ್ಡಿ ?

ಮಂತ್ರಿ—ಅವನು ತನ್ನ ಯೋಗ ಮಾಯೆಯಿಂದ ಎಲ್ಲರನ್ನೂ ತನ್ನ ವಶಪಡಿಸಿಕೊಳ್ಳುತ್ತಿರುವನು.

ರಾಜ—ನಾವು ಈಗ ಒಂದುಪಾಯ ಮಾಡೋಣ. ವೈಷ್ಣವರು ತಲೆ ಎತ್ತದಂತೆ ಮಾಡೋಣ. ಮಂತ್ರಿಗಳೇ ಒಂದು ಫಲಕದಲ್ಲಿ 'ಶಿವಾತ್ಪರತರಂನಾಸ್ತಿ' ಎಂದು ಬರೆಸಿ ಎಲ್ಲರೂ ಇದಕ್ಕೆ ಒಪ್ಪಬೇಕೆಂದು ತಿಳಿಸಿ ಮತ್ತೆ ಎಲ್ಲರ ಸಹಿಯನ್ನು ಮಾಡಿಸಿ.

ಮಂತ್ರಿ—ಒಪ್ಪದಿದ್ದರೆ ?

ರಾಜ—ಅವರ ಆಸ್ತಿಪಾಸ್ತಿಗಳನೆಲ್ಲಾ ಕಿತ್ತುಕೊಳ್ಳಿ

ಮಂತ್ರಿ—ಅದಕ್ಕೂ ಒಪ್ಪದಿದ್ದರೆ ?

ರಾಜ—ಗಡೀಪಾರು ಮಾಡಿಬಿಡಿ.

ಮಂತ್ರಿ—ಇನ್ನೂ ಏನು ಶಿಕ್ಷೆ ಕೊಡಬಹುದು ?

ರಾಜ—ಕಣ್ಣುಗಳನ್ನು ಕೀಳಿಸಿ ಬಿಡಿ. ಅವರನ್ನು ಕೊಲ್ಲಿಸುವುದಕ್ಕೂ ನಿಮಗೆ ಅಧಿಕಾರ ಉಂಟು.

ಮಂತ್ರಿ—ತಮ್ಮ ಅಪ್ಪಣೆಯಂತೆ ನಡೆದುಕೊಳ್ಳುವೆವು

ಕಾಲೂರಾನ್—(ಎದ್ದು ನಿಂತು) ಮಹಾಪ್ರಭುಗಳೇ ತಾವಿಟ್ಟ ಅಣತಿ ಎಲ್ಲವೂ ಸರಿಯೆ. ಆದರೆ ನಾನೊಂದುಪಾಯವನ್ನು ಹೇಳುವೆನು.

ರಾಜ—ಏನದು ?

ಕಾಲೂರಾನ್—ತಾವೇನೋ ಈ ಫಲಕಕ್ಕೆ ಸಹಿಯನ್ನು ಮಾಡಿಸಬೇಕೆಂದು ಹೇಳಿದಿರಿ ?

ರಾಜ—ಹೌದು, ಹೇಳಿದೆ.

ಕಾಲೂರಾನ್—ಸಹಿ ಮಾಡದಿದ್ದವರಿಗೆ ಕ್ರೂರ ದಂಡನೆ ಎಂದೂ ಹೇಳಿದಿರಿ. ಆದರೆ ?

ರಾಜ—ಏನು, ಆದರೆ ?

ನಾಲೂರಾನ್—ಇದರಿಂದ ನಿಮ್ಮ ಮತ ಪ್ರಚಾರವು ಬೆಳೆಯುವುದೇ ?

ರಾಜ—ಏಕೆ ಬೆಳೆಯುವುದಿಲ್ಲ ?

ನಾಲೂರಾನ್—ನೀವು ಹಲವಾರು ಜನರಿಗೆ ಶಿಕ್ಷೆ ವಿಧಿಸಿದರೇನು ? ಪ್ರಚಾರ ಮಾಡು ವವರು ಮಾಡುತ್ತಲೇ ಇರುವರು.

ರಾಜ—ಯಾರು ಅವರು ?

ನಾಲೂರಾನ್—ಅದೇ ಆ ರಾಮಾನುಜರೆಂಬುವರು. ಶ್ರೀ ವೈಷ್ಣವರ ಗುರುಗಳು. ಅವರ ಕೈಲಿ ಈ ಫಲಕಕ್ಕೆ ಹಸ್ತಾಕ್ಷರ ಹಾಕಿಸಿದರೆ ನಮ್ಮ ಶತ್ರುಗಳ ದಮನವಾದಂತಾಗುವುದು.

ರಾಜ—ಹಾಗಾದರೆ, ಮಂತ್ರಿಗಳೇ ಈಗಲೇ ಆತನನ್ನು ನಮ್ಮ ಆಸ್ಥಾನಕ್ಕೆ ಕರೆಸಿ. ಅವನ ಬಳಿ ಹಸ್ತಾಕ್ಷರ ಹಾಕಿಸೋಣ.

ಮಂತ್ರಿ—ರಾಜಭಟರುಗಳೇ ಈಗಲೇ ಶ್ರೀರಂಗಕ್ಕೆ ಹೋಗಿ ರಾಮಾನುಜನನ್ನು ಕರೆದು ಕೊಂಡು ಬನ್ನಿ

ರಾಜಭಟರು—ಆಗಲಿ ಜೀಯ. ಈಗಲೇ ಹೋಗುವೆವು (ಹೋಗುವರು)

ರಾಜ—ಇಂದಿನ ಸಭೆಯನ್ನು ವಿಸರ್ಜಿಸೋಣ ನಾಳೆ ಪುನಃ ಸಭೆ ಸೇರೋಣ.

ವಂದಿಮಾಗಧರು—ಮಹಾರಾಜಾಧಿರಾಜ, ಚೋಳರಾಜರು ನಿರ್ಗಮಿಸುವರು, ಬಹು ಪರಾಕ್, ಬಹು ಪರಾಕ್. (ರಾಜ ಮೊದಲು ತೆರಳುವನು. ನಂತರ ಎಲ್ಲರೂ ತೆರಳುವರು)

(ತೆರೆ ಬೀಳುವುದು)

## ದೃಶ್ಯ—೨

[ಸ್ಥಳ–ಶ್ರೀರಂಗ, ರಾಮಾನುಜರ ಮಠ ಹಜಾರದಲ್ಲಿ ಕೆಲವು ಶಿಷ್ಯರು ವೇದಾಂತದ ವಿಷಯ ಚರ್ಚಿಸುತ್ತಿರುವರು. ಚೋಳರಾಜನ ಆಜ್ಞೆಯನ್ನು ಹೊತ್ತ ರಾಜಭಟರು ರಾಮಾನುಜರ ಮಠಕ್ಕೆ ಬರುವರು.]

ರಾಜಭಟರು—ಶ್ರೀಮನ್ ರಾಮಾನುಜರು ಎಲ್ಲಿ ?

ಒಬ್ಬ ಶಿಷ್ಯ—ಅವರು ಎಲ್ಲಿ ಎನ್ನುವುದು ಗೊತ್ತಿಲ್ಲ. ಏಕೆ ?

ರಾಜಭಟ—ಅವರನ್ನು ಚೋಳರಾಜನು ಈಗಲೇ ಕರೆತರಲು ಆಜ್ಞಾಪಿಸಿದ್ದಾರೆ.

ಶಿಷ್ಯ—ನಿಲ್ಲಿ, ಒಳಗೆ ಹೋಗಿ ವಿಚಾರಿಸುವೆ (ಒಳಗೆ ಪ್ರವೇಶಿಸುವರು. ಕೂರೇಶರು ರಾಮಾನುಜರಿಗೆ ಸ್ನಾನಕ್ಕೆ ತಣ್ಣೀರು ತೋಡುತ್ತಿರುವರು. ರಾಮಾನುಜರು ಸ್ನಾನ ಮಾಡುತ್ತಿರುವರು. ಹತ್ತಿರ ಬಂದು ಕೂರೇಶರ ಕಿವಿಯಲ್ಲಿ ವಿಚಾರ ತಿಳಿಸುವರು )

(ಹೊರಗೆ ರಾಮಾನುಜರ ಶಿಷ್ಯರಿಗೂ, ರಾಜಭಟರಿಗೂ ಮಾತುಕತೆ ನಡೆಯು ತ್ತಿರುವುದು)

ಮತ್ತೊಬ್ಬ ಶಿಷ್ಯ—ಏಕೆ ? ಈ ವೇಳೆಯಲ್ಲಿ ರಾಜಾಧಿರಾಜರ ಅಪ್ಪಣೆಯಾಗಿರುವುದು ?

ರಾಜಭಟ—ಅದೇನೋ ನಾವರಿಯೆವು. ಈಗಲೇ ಕರೆತರಲು ಹೇಳಿದ್ದಾರೆ.

ಶಿಷ್ಯ—ಅಂತಹ ಅವಸರದ ಸಂದರ್ಭವೇನೆಂದು ಹೇಳಿ ರಾಮಾನುಜರನ್ನು ಬೇಗಲೇ ಕರೆ ಕಳುಹಿಸಬಹುದು.

ರಾಜಭಟ—ರಾಜನ ಶೈವ ಸಂಪ್ರದಾಯದ ಪತ್ರಕ್ಕೆ ಸಹಿ ಹಾಕಲು.

ಶಿಷ್ಯ—ಬಹಳ ಸಂತೋಷ. ಈಗಲೇ ಕೂರೇಶರಿಗೆ ತಿಳಿಸಿ, ರಾಮಾನುಜರನ್ನು ಕರೆತರಲು ಏರ್ಪಾಡು ಮಾಡುವೆವು. ತಾವು ಸ್ವಲ್ಪ ವಿಶ್ರಮಿಸಿಕೊಳ್ಳಿ. ಇದೋ ಈಗಲೇ ಬಂದೆವು

(ಬಳಿಗೆ ಹೋಗಿ ಕೂರೇಶರ ಕಿವಿಯಲ್ಲಿ ರಾಜನ ಆಜ್ಞೆಯ ವಿವರವನ್ನು ಹೇಳುವರು )

ಕೂರೇಶ—ಅಯ್ಯೋ ! ನಮ್ಮ ಭಗವಂತನಿಗೆ ಅನಿಷ್ಟವೇ ! ಹಾ, ರಂಗನಾಥ !

ಪೆರಿಯನಂಬಿ—ಏನು ಕೂರೇಶ, ಏಕೆ ಹೀಗೆ ಚಿಂತಾಕ್ರಾಂತರಾಗಿರುವಿರಿ ?

ಕೂರೇಶ—ಗುರುಗಳೇ ನಮ್ಮ ಆಚಾರ್ಯರಿಗೆ ಅಪಾಯ ಸಂಭವಿಸುವಂತಿದೆ. ನಾನೀಗಲೇ ರಾಜನ ಬಳಿಗೆ ಹೋಗುವೆನು ನೀವು ಆಚಾರ್ಯರನ್ನು ನೋಡಿಕೊಳ್ಳಿ.

(ತಮ್ಮ ಉಡುಪನ್ನು ಬಿಚ್ಚಿ, ರಾಮಾನುಜರ ಕಾಷಾಯ ವಸ್ತ್ರ, ತ್ರಿದಂಡವನ್ನು ಧರಿಸಿ ಹೊರಗೆ ಬಂದು)

ಕೂರೇಶ—ರಾಜಭಟರುಗಳೇ ಹೊರಡಿ, ರಾಜನ ಬಳಿಗೆ ಹೋಗೋಣ. (ಮೂವರೂ ತೆರಳುವರು ಪೆರಿಯನಂಬಿ ಹಿಂದೆಯೇ ಓಡುವರು )

ಪೆರಿಯನಂಬಿ—ಕೂರೇಶ ಕೂರೇಶ ನಿಲ್ಲು, ನಿಲ್ಲು ನಾನೂ ಬಂದೆ, ಒಬ್ಬನೇ ಹೋಗಬೇಡ ಬಂದೆ (೮೦ ವರ್ಷದ ವೃದ್ಧರಾದರೂ ಓಡುವರು )

(ಮಠದ ಒಳಗೆ—ರಾಮಾನುಜರು ಸ್ನಾನಮಾಡಿ ಮೇಲೆ ಬರುವರು )

ರಾಮಾನುಜ—ಕೂರೇಶಾ ಕೂರೇಶಾ ಎಲ್ಲಿ ಹೋದೆ ? ಎಲ್ಲಿ ಹೋದೆ ಕೂರೇಶಾ ನನಗೆ ಒರಸಲು ತುಂಡು, ಉಡಲು ಕಾಷಾಯ ವಸ್ತ್ರ ಕೊಡು

ರಾಮಾನುಜರ ಶಿಷ್ಯ—ಸ್ವಾಮಿ ಅವರು ಇಲ್ಲ.

ರಾಮಾನುಜ—ಎಲ್ಲಿ ಹೋದರು, ಕೂರೇಶರು ?

ಶಿಷ್ಯ—ಆಚಾರ್ಯರೇ, ಈ ತುಂಡನ್ನು ತೆಗೆದುಕೊಳ್ಳಿ.

ರಾಮಾನುಜ—ನನ್ನ ಬಟ್ಟೆಗಳನ್ನು ಸ್ವಲ್ಪ ತಂದುಕೊಡಿ.

ಶಿಷ್ಯ—(ಹೋಗಿ ನೋಡಿ) ಆಚಾರ್ಯರೇ, ಅಲ್ಲಿ ತಮ್ಮ ಬಟ್ಟೆಗಳಿಲ್ಲ ಕೂರೇಶರ ಬಿಳಿಯ ಬಟ್ಟೆಗಳಿರುವುವು

ರಾಮಾನುಜ—ಕೂರೇಶನು ಏಕೆ ಹೀಗೆ ಮಾಡಿದ ? ನನ್ನ ಬಟ್ಟೆಗಳನ್ನು ಹೇಗೆ ಧರಿಸಿದ ! ಏನು ಕಾರಣ ? ಕೂರೇಶನಂತಹ ಮೇಧಾವಿ ಈ ರೀತಿ ಮಾಡಿದ್ದಲ್ಲಿ ಏನೋ ಇರಬೇಕು.

ಶಿಷ್ಯ—ಏನೋ ಗೊತ್ತಾಗಲಿಲ್ಲ. ಅವರು ತಮ್ಮ ಬಟ್ಟೆಗಳನ್ನು ಉಟ್ಟು ಅವಸರವಾಗಿ ಹೋದರು.

ರಾಮಾನುಜ—ಏಕೆ ಅವಸರವಾಗಿ ಹೋದರು ? ನನಗೂ ತಿಳಿಸದೆ ಹೋದರಲ್ಲಾ ? ಯಾರಾದರೂ ಬಂದಿದ್ದರೆ ?

ಶಿಷ್ಯ—ಚೋಳರಾಜನ ರಾಜಭಟರು ಬಂದಿದ್ದರು.

ರಾಮಾನುಜ—ಚೋಳರಾಜನು ನಮ್ಮನ್ನು ಕರೆಕಳುಹಿಸಿದರೆ ಅವರ‍್ಯಾಕೆ ಹೋದರು ? ನಾನೂ ಈಗಲೇ ಹೋಗುವೆ.

ದಾಶರಥಿ—ಗುರುಗಳೇ ತಾವು ದಯವಿಟ್ಟು ಹೋಗಬೇಡಿ, ತಮ್ಮ ರಕ್ಷಣೆಗಾಗಿಯೇ ಕೂರೇಶರು ಹೋಗಿರುವರು.

ರಾಮಾನುಜ—ನಾನು ಹೋಗಿ ಅಲ್ಲಿ ಜಯಿಸಿ ಬರುತ್ತಿದೆ. ಕೂರೇಶನಿಗೆ ಏನಾದರೂ ತೊಂದರೆ ಸಂಭವಿಸಿದರೆ ?

(ಇಬ್ಬರು ಶಿಷ್ಯರು ಓಡಿ ಓಡಿ ಬರುವರು)

ಇಬ್ಬರೂ ಒಟ್ಟಿಗೆ—ಗುರುಗಳೇ. ಗುರುಗಳೇ. ಬೇಗ ಹೊರಡಿ, ಬೇಗ ಹೊರಡಿ, ರಾಜ ಭಟರು ತಮ್ಮನ್ನು ಹುಡುಕುತ್ತಿದ್ದಾರೆ. ಅವರ ಕೈಯಿಂದ ತಪ್ಪಿಸಿ ಕೊಳ್ಳಿ

ದಾಶರಥಿ—ಬನ್ನಿ ಗುರುಗಳೇ ಈ ಬಾಗಿಲಿನಿಂದ ಬೇಗ ಹೋಗೋಣ.

ರಾಮಾನುಜ—ಇದೇನು ಹೀಗೆ ಹೇಳುತ್ತಿರುವಿರಿ ದಾಶರಥಿಗಳೇ ? ಒಬ್ಬ ರಾಜನಿಗೆ ಹೆದರಿ ಹೇಡಿಯ ಹಾಗೆ ಓಡುವುದೇ ! ಅದೂ ನನ್ನ ಪ್ರಿಯ ಶಿಷ್ಯ ಕೂರೇಶನನ್ನು ತೊಂದರೆಗೆ ಒಳಪಡಿಸಿ ? ನಾನು ಬರಲಾರೆ, ನಾನು ಓಡುವುದಿಲ್ಲ. ನಾನು ಆ ದುಷ್ಟ ಚೋಳನ ಬಳಿಗೆ ಹೋಗುವೆ.

ದಾಶರಥಿ—ಚೋಳರಾಜನ ಆಜ್ಞೆ ಬಹಳ ಭಯಂಕರವಾಗಿರುವುದು.

ರಾಮಾನುಜ—ಏನು ಆಜ್ಞೆ ?

ದಾಶರಥಿ—ರಾಜನ ಶೈವ ಸಂಪ್ರದಾಯದ ಪತ್ರಕ್ಕೆ ಸಹಿ ಹಾಕಬೇಕಂತೆ.

ರಾಮಾನುಜ—ಅದಕ್ಕೆ ಹೆದರಿ ಓಡುವುದೆ ?

ದಾಶರಥಿ—ಹಾಗಲ್ಲ ಗುರುಗಳೇ, ಸಹಿ ಹಾಕದವರಿಗೆ ಘೋರ ದಂಡನೆಯಂತೆ.

ರಾಮಾನುಜ—ಆಜ್ಞೆ ಹೇಗಿದ್ದರೇನು. ನಾನು ಜಯಿಸಿ ಬರುತ್ತೇನೆ.

ದಾಶರಥಿ—ಅದು ಹೇಗೆ ಸಾಧ್ಯ ?, ಆ ರಾಜ ವಾದವಿವಾದಕ್ಕೆ ಕರೆದರೆ ತಾನೆ ?

ರಾಮಾನುಜ—ಇನ್ನೇನು ಮಾಡುತ್ತಿದ್ದ ?

ದಾಶರಧಿ—ಆತನ ಆಜ್ಞೆಯನ್ನು ಕಣ್ಣು ಮುಚ್ಚಿ ಪಾಲಿಸಬೇಕು,

ರಾಮಾನುಜ—ಇಲ್ಲದಿದ್ದರೆ ?

ದಾಶರಧಿ—ಇಲ್ಲದಿದ್ದರೆ ಕಣ್ಣು ಕೀಳಿಸುವುದೇ ಮೊದಲಾದ ಕ್ರೂರದಂಡನೆ.

ರಾಮಾನುಜ—ಹಾಗಾದರೆ ನನಗಾಗಿ ನನ್ನ ಪ್ರಿಯ ಶಿಷ್ಯ ಕ್ರೂರ ದಂಡನೆಗೆ ಒಳಗಾಗುವುದೆ ? ಬನ್ನಿ ಹೋಗಿ ಬಿಡಿಸೋಣ.

ದಾಶರಧಿ—ಸ್ವಾಮಿ, ತಾವು ಹೋಗುವುದು ಬೇಡ ಆ ರಾಜ ಅಂಥ ಪ್ರವೃತ್ತಿಯವನು ಏನಾದರೂ ಮಾಡಿಬಿಟ್ಟಾನು ತಾವು ಮಾಡಿರುವ ಪ್ರತಿಜ್ಞೆ ಜ್ಞಾಪಿಸಿ ಕೊಳ್ಳಿ ಅದನ್ನು ಪೂರೈಸಬೇಡವೆ ?

ರಾಮಾನುಜ—ಹೌದು, ನನ್ನ ಗುರುಗಳಿಗಿತ್ತ ಪ್ರತಿಜ್ಞೆ ನಡೆಸಲು ನಾನು ಈಗ ಹೋಗಲೇಬೇಕು ಜನತಾ ಜನಾರ್ಧನ ಸೇವೆ ಮಾಡಲೇ ಬೇಕು, ಹಾ, ರಂಗನಾಥ ! ಕೂರೇಶರನ್ನ ನೀನೇ ಕಾಪಾಡು, ಎಲ್ಲಾ ಭಗವದಿಚ್ಛೆ ! (ಎಲ್ಲರೂ ಹೋಗುವರು)

(ತೆರೆ ಬೀಳುವುದು)

## ದೃಶ್ಯ—೩

[ರಾಮಾನುಜರೂ, ಅವರ ಶಿಷ್ಯರೂ ಬೇಗ ಬೇಗ ಬರುತ್ತಿರುವರು ಕಾವೇರಿ ನದಿಯು ಸಿಕ್ಕುವುದು,]

ರಾಮಾನುಜ—(ಸ್ವಲ್ಪ ಹೊತ್ತು ನಿಂತು) ದಾಶರಧಿಗಳೇ ಈ ಕಾವೇರಿ ನದಿಯನ್ನು ನೋಡಿದಿರಾ ! ಎಷ್ಟು ಭೋರ್ಗರೆಯುತ್ತಾ ಹರಿಯುತ್ತಿರುವಳು ? ನದಿಯ ಮಧ್ಯೆ ಏಳುತ್ತಿರುವ ಉನ್ನತ ತರಂಗಾತರಂಗಗಳನ್ನು ನೋಡಿದಿರಾ ? ಎಷ್ಟು ಆನಂದದಿಂದ ಬಳುಕಿ ಬಳುಕಿ ಹರಿಯುತ್ತಿರುವಳು ! ತಾಯೇ ! ನೀನೇ ನಮಗೆ ದಾರಿ ತೋರಿಸು ಎಂದು ಕೈ ಮುಗಿದು ಪ್ರಾರ್ಥಿಸುವರು. ಬನ್ನಿ ಎಲ್ಲಾ ಬೇಗ ಬೇಗ ನದಿಯನ್ನು ದಾಟುವ (ಎಲ್ಲರೂ ಬೇಗ ಬೇಗ ನದಿಯಲ್ಲಿಳಿದು ನಡೆದುಕೊಂಡು ಹೋಗುವರು. ಹಿಂದಿನಿಂದ ರಾಮಾನುಜರನ್ನು ಹುಡುಕುತ್ತಾ ರಾಜ ಭಟರು ಬರುವರು.)

ರಾಜಭಟ ೧—ನಾವು ಎಷ್ಟೇ ಹುಷಾರಾಗಿದ್ದರೂ ಆ ಸಾಧು ರಾಮಾನುಜ ಗುರು ತಪ್ಪಿಸಿಕೊಂಡು ಬಿಟ್ಟನಲ್ಲಾ ?

ರಾಜಭಟ ೨—ಎಂತಹ ಮೋಸದ ಸನ್ಯಾಸಿ ? ಎಲ್ಲರಿಗೂ ಶಿವನ ವಿರೋಧವಾಗಿ ವಿಷ್ಣುವಾದವ್ಯವನ್ನು ಉಪದೇಶ ಮಾಡಿ ದೀಕ್ಷೆ ಕೊಡುತ್ತಾನೆ. ಅವನನ್ನು ಹುಡುಕಲೇ ಬೇಕು. (ಆ ಕಡೆ ಈ ಕಡೆ ನೋಡಿ) ಅಗೋ!

ಅಲ್ಲಿ ಕಾಣುತ್ತಿದೆಯಲ್ಲಾ ಆ ನದಿಯ ಮಧ್ಯೆ ಕೆಲವರು ಹೋಗುತ್ತಿದ್ದಾರೆ. ಅವರೇ ಇರಬಹುದು. ಬೇಗ ಬಾ ಹೋಗುವ. (ಇಬ್ಬರು ರಾಜಭಟರೂ ಹೋಗುವರು.)

ರಾಮಾನುಜ ಮೊದಲಾದ ಭಾಗವತರು ಓಡೋಡಿ ಬರುವರು.

ಭಾಗವತರು—ಸಧ್ಯ ಹೊಳೆ ದಾಟಿದೆವಲ್ಲಾ ! ಗುರುಗಳೇ ಈಗೇನು ಮಾಡುವುದು ? ರಾಜಭಟರು ಇಲ್ಲೂ ಬಂದರಲ್ಲಾ !

ರಾಮಾನುಜ—ನಮ್ಮನ್ನು ಶ್ರೀರಂಗನಾಥನೇ ಕಾಪಾಡಬೇಕು. ಅವನೇ ನಮ್ಮ ರಕ್ಷಕ, ಬನ್ನಿ ಧ್ಯಾನ ಮಾಡೋಣ. (ಎಲ್ಲರೂ ಸೇರಿ ಭಗವಂತನ ಧ್ಯಾನ ಮಾಡುವರು)

ಒಬ್ಬ ಭಾಗವತ—ಆಗೋ ಗುರುಗಳೇ ಬಂದೇಬಿಟ್ಟರು.

ರಾಮಾನುಜ—(ಹಿಂದಿರುಗಿ ನೋಡಿ) ಒಂದು ಹಿಡಿ ಮಣ್ಣು ತೆಗೆದು ಅಭಿಮಂತ್ರಿಸಿ ಎಸೆಯುವರು) ಮತ್ತೆ ಎಲ್ಲರೂ ಬೇಗ ಬೇಗ ಹೋಗುವರು. ರಾಜ ಭಟರು ಕಣ್ಣುಗಳನ್ನು ಉಜ್ಜುತ್ತಾ ಒದ್ದಾಡುತ್ತಾ ಬರುವರು.

ರಾಜಭಟರು—ಅಯ್ಯೋ ಕಣ್ಣೇ ಕಾಣುವುದಿಲ್ಲವಲ್ಲಾ ? ದಾರಿಯೇ ಕಾಣುವುದಿಲ್ಲ ? ಎಲ್ಲೆಲ್ಲಿಯೂ ಧೂಳು ಎದ್ದು ದಾರಿಯನ್ನೇ ಮುಚ್ಚಿದೆಯಲ್ಲಾ ?

ಮತ್ತೊಬ್ಬ—ನಡೀ, ರಾಜನ ಬಳಿಗೆ ಹೋಗುವ. ನಾವು ಮುಂದೆ ಹೋಗೋಕಾಗೋ ದಿಲ್ಲ. ಕಾಲೆಲ್ಲಾ ಹಿಡಿದು ಬಿಟ್ಟಿದೆ. ಹೆಜ್ಜೆ ಇಡಲು ಆಗೋಲ್ಲ. ಅವರೆಲ್ಲಾ ಎಲ್ಲೋ ಮರೆಯಾಗಿ ಹೋದರು. (ಇಬ್ಬರೂ ಕುಸಿದು ಬೀಳುವರು) ರಾಮಾನುಜ ಮತ್ತೆಲ್ಲರೂ ಬರುವರು.

ಎಲ್ಲರೂ—ಅಂದ ನಾಡ್ಯೆ ವಿಟ್ಟ್ ವಂದೋಮೇ.

ಇಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳೋಣ ಎಂದು ಎಲ್ಲರೂ ಕುಳಿತುಕೊಳ್ಳುವರು.

ರಾಮಾನುಜ—ಸುತ್ತಲೂ ನೋಡಿ, ಬನ್ನಿ ಅಲ್ಲಿ ಒಂದು ದಟ್ಟವಾದ ಅರಣ್ಯ ಕಾಣುತ್ತಾ ಇದೆ, ಅಲ್ಲಿಗೆ ಹೋಗಿ ಮರೆಯಾಗಿರೋಣ. (ಎಲ್ಲರೂ ಹೊರಡುವರು)

(ನೀಲಗಿರಿಯ ದಟ್ಟವಾದ ಕಾಡು. ಕಗ್ಗತ್ತಲೆಯಿಂದ ಕೂಡಿರುವುದು ಹಕ್ಕಿಗಳ ಚಿಲಿಪಿಲಿನಾದ, ಕ್ರೂರ ಮೃಗಗಳ ಘರ್ಜನೆ ಕೇಳುವುದು. ಕೆಲವು ಬೇಡರು ಕೈಯಲ್ಲಿ ಬಿಲ್ಲು, ಬಾಣ ಹಿಡಿದಿರುವರು. ಮತ್ತೆ ಕೆಲವರು ಒಂದು ಸತ್ತ ನರಿಯನ್ನು ಹೊತ್ತು ತರುವರು. (ವೈಷ್ಣವರು ತಾವು ತಪ್ಪಿಸಿಕೊಂಡ ವಿಷಯ ಮಾತಾಡುತ್ತಾ ಬರುವರು)

ಒಬ್ಬ ಬೇಡ—ನಾವು ಇದನ್ನು ಬಹಳ ಕಷ್ಟಪಟ್ಟು ಹೊಡೆದಿದ್ದೇವೆ. ಆದ್ದರಿಂದ ನಮಗೆ ಇದರ ಹೆಚ್ಚು ಭಾಗ ಸಲ್ಲಬೇಕು.

ಮತ್ತೊಬ್ಬ—ಅದೆಲ್ಲಾ ಆಗದು, ನಾನು ಮುಖ್ಯಸ್ಥ. ನಮಗೆ ಹೆಚ್ಚಿನ ಭಾಗ ಬರಬೇಕು. (ಹೀಗೆಯೇ ಜಗಳ ಆಡುತ್ತಿರುವರು. ರಾಮಾನುಜರೂ, ಅವರ ಶಿಷ್ಯರೂ ಬರುವರು)

ಒಬ್ಬ ಬ್ರಾಹ್ಮಣ—ಏಕೆ ಹೀಗೆ ಜಗಳವಾಡುತ್ತಿರುವಿರಿ ? ಏನು ಜಗಳ ? ಎಲ್ಲರೂ ಎದ್ದು ನಿಂತು ದಿಗ್ಭ್ರಾಂತಿಯಿಂದ ಆ ವೈಷ್ಣವರನ್ನು ನೋಡುವರು. ಎಲ್ಲರೂ ಮಳೆಯಲ್ಲಿ ಅದ್ದಿ ಮುದ್ದೆಯಾಗಿರುವುದನ್ನು ನೋಡಿ,

ಬೇಡ—ನೀವುಗಳು ಎಲ್ಲಿಂದ ಬರುತ್ತಿದ್ದೀರಿ ?

ವೈಷ್ಣವ—ನಾವು ಶ್ರೀರಂಗದಿಂದ ಬರುತ್ತಿದ್ದೇವೆ

ಬೇಡ—ಮಳೆಯಲ್ಲಿ ಅದ್ದಿ ಮುದ್ದೆಯಾಗಿದ್ದೀರಲ್ಲಾ ? ಏಕೆ ಹೀಗೆ ನೆನೆದಿದ್ದೀರಿ ?

ವೈಷ್ಣವ—ನಾವೆಲ್ಲಾ ಶ್ರೀ ವೈಷ್ಣವರು ದಾರಿಯಲ್ಲಿ ಬರುತ್ತಿದ್ದಾಗ, ಪ್ರಬಲವಾದ ಮಳೆಗೆ ಸಿಕ್ಕಿಕೊಂಡೆವು.

ಬೇಡ—ಭಿಲ್ಲ, ಹೋಗಿ ಇವರಿಗೆಲ್ಲಾ ಉಡಿಗೆಯನ್ನು ತಂದುಕೊಡು.

ಭಿಲ್ಲ—ಇಗೋ ಈಗಲೇ ಹೊರಟೆ (ಹೋಗುವನು ಉಡಿಗೆಗಳನ್ನು ತಂದು) ತೆಗೆದುಕೊಳ್ಳಿ ವೈಷ್ಣವರೇ (ಎಂದು ಎಲ್ಲರಿಗೂ ಕೊಡುವನು ವೈಷ್ಣವರುಗಳು ತೆಗೆದುಕೊಂಡು ತಮ್ಮ ಉಡಿಗೆಯನ್ನು ಬದಲಾಯಿಸುವರು )

ಬೇಡ—ಭಿಲ್ಲ, ಇವರಿಗೆ ಧಾನ್ಯವನ್ನು, ಜೇನು ತುಪ್ಪವನ್ನು ತಂದುಕೊಡು (ಭಿಲ್ಲ ಹೋಗಿ ತರುವನು)

ಭಿಲ್ಲ—ತೆಗೆದುಕೊಳ್ಳಿ ಸ್ವಾಮಿಗಳೇ. ಇವೆರಡನ್ನೂ ಕಲಿಸಿ ಭುಂಜಿಸಿ ಈ ದಿನದ ಹಸಿವನ್ನು ನೀಗಿಸಿಕೊಳ್ಳಿ. (ಎಲ್ಲರೂ ಎರಡನ್ನೂ ಕಲಿಸಿ ಭುಂಜಿಸಲು, ಅನುಮಾನಿಸುವರು )

ಬೇಡ—ನಾವು ನಲ್ಲಾನ್ ಚಕ್ರವರ್ತಿ ವಂಶದವರು. ರಾಮಾನುಜರು ನಮ್ಮ ಗುರುಗಳು. ತಾವು ಶ್ರೀರಂಗದಿಂದ ಬರುತ್ತಿದ್ದೇವೆ ಎಂದು 'ಹೇಳಿದಿರಿ ನಮ್ಮ ರಂಗನಾಥನು ಕ್ಷೇಮದಿಂದ ಇರುವನೇ ? ಅವರ ಶೆಲ್ವಕುಮಾರರಾದ ನಮ್ಮ ರಾಮಾನುಜರು ಕ್ಷೇಮವೇ ?

ವೈಷ್ಣವರು—ಅಯ್ಯೋ ಅದೇನೆಂದು ಹೇಳಲಿ ? ಚೋಳರಾಜನಿಗೆ ಭಯಪಟ್ಟು, ರಾಮಾನುಜರು ಕೆಲವು ಶಿಷ್ಯರೊಡನೆ ದಕ್ಷಿಣ ದಿಕ್ಕಿಗೆ ಬಂದರು. ಅತಿಯಾದ ಮಳೆಯಿಂದ ನಾವು ಕೆಲವರು ಬೇರೆಯಾದೆವು. ಅವರನ್ನು ಹುಡುಕುತ್ತಾ, ಇಲ್ಲಿ ಬಂದೆವು, ಅಯ್ಯೋ ಈ ಗೊಂಡಾರಣ್ಯದಲ್ಲಿ ಅವರು ಎಲ್ಲಿ ತಪ್ಪಿಸಿಕೊಂಡರೋ ? ಯಾವ ಪ್ರಾಣಿಗೆ ತುತ್ತಾದರೋ ? ಹಾ ರಂಗನಾಥ ! ಅವರನ್ನು ರಕ್ಷಿಸು, (ಎಂದು ಅಳುವರು. ಇದನ್ನು ಕೇಳಿದ ಬೇಡರು ತಮ್ಮ ಕೆಲಸವನ್ನು ಹಾಗೇ ಬಿಟ್ಟು ಜೋರಾಗಿ ಅಳುತ್ತಾ, ಶ್ರೀರಂಗದ ಕಡೆ ಮುಖಮಾಡಿ ಕೈ ಮುಗಿದು,)

ಎಲ್ಲಾ ಬೇಡರು—ಎಲೈ ರಂಗನಾಥ! ನಮ್ಮ ಎಂಬೆರುಮಾನಾರನ್ನು ನೀನು ಕೈ ಬಿಡುವುದಿಲ್ಲವಲ್ಲವೇ? ಬೇಗ ಅವರಿರುವ ಜಾಗವನ್ನು ನಮಗೆ ತಿಳಿಸುವವನಾಗು ಎಂದು ಪ್ರಾರ್ಥಿಸುವರು. (ನಾವೀಗಲೇ ರಾಮಾನುಜರನ್ನು ಹುಡುಕಿ ತರುತ್ತೇವೆ. ತಾವು ಇಲ್ಲೇ ವಿಶ್ರಮಿಸಿಕೊಂಡಿರಿ ಎಂದು ಹೇಳಿ ಬೇಗ ಬೇಗ ಹೋಗುವರು.

(ತೆರೆ ಬೀಳುವುದು)

## ದೃಶ್ಯ—೪

[ಅದೇ ಕಾಡಿನ ದೃಶ್ಯ. ಒಂದು ಕಡೆಯಿಂದ ರಾಮಾನುಜರೂ, ಅವರ ಶಿಷ್ಯರೂ ಮಳೆಯಲ್ಲಿ ಅದ್ದಿ ಮುದ್ದೆಯಾಗಿ ಬರುವರು.]

ಶಿಷ್ಯರು—ಗುರುಗಳೇ, ನಮ್ಮಿಂದ ಈ ಚಳಿ ತಡೆಯಲಾಗುತ್ತಿಲ್ಲ. ಈ ಕಾಡಿನಲ್ಲಿ ಎಲ್ಲಾದರೂ ಸ್ವಲ್ಪ ತಂಗೋಣವೇ?

ರಾಮಾನುಜ—ಹಾಗೇ ಆಗಲಿ. ಸ್ವಲ್ಪ ಮುಂದೆ ಹೋಗಿ ನೋಡೋಣ. ನಾಲ್ಕು ಹೆಜ್ಜೆ ಮುಂದೆ ಇಡುವರು. ಆ ಕಡೆಯಿಂದ ಬೇಡರು ಬರುವರು.

ಒಬ್ಬ ವೈಷ್ಣವ—ಅಪ್ಪಾ ಬೇಡ ನಮ್ಮಿಂದ ಈ ಚಳಿ ತಡೆಯಲಾಗುತ್ತಿಲ್ಲ. ಇಲ್ಲಿ ಎಲ್ಲಾದರೂ ತಂಗಲು ಸ್ಥಳವಿದೆಯೇ?

ಬೇಡ—ತಮ್ಮನ್ನು ನೋಡಿದರೆ ಚಳಿಯಿಂದ ಬಹಳ ಪರಿತಪಿಸುವಂತಿದೆ. ಬನ್ನಿ, ಅಗೋ ನೋಡಿ, ಅಲ್ಲಿ ಉರಿಯು ಕಾಣುತ್ತಿದೆಯಲ್ಲಾ, ಅದೇ ನಮ್ಮ ಒಡೆಯನ ಮನೆ ಅಲ್ಲಿ ಹೋಗಿ ವಿಶ್ರಮಿಸಿಕೊಳ್ಳುವಿರಂತೆ.

ವೈಷ್ಣವ—ಹಾಗೇ ಆಗಲಿ ಬನ್ನಿ ಗುರುಗಳೇ ಅಲ್ಲಿ ಹೋಗುವ. (ಎಲ್ಲರೂ ಬೇಡನ ಹಿಂದೆ ಹೋಗುವರು) ಬೇಡನ ಮನೆಯ ಮುಂದೆ ಬೆಂಕಿಯು ಉರಿಯುತ್ತಿರುವುದು ಮೊದಲು ಬಂದ ವೈಷ್ಣವರು ಬೆಂಕಿಯ ಮುಂದೆ ಕುಳಿತಿರುವರು.

ಬೇಡ—ಬನ್ನಿ ಇಲ್ಲಿ, ಈ ಉಡಿಗೆಗಳನ್ನು ಧರಿಸಿ. ಈ ಬೆಂಕಿಯಲ್ಲಿ ಮೈ ಕಾಯಿಸಿಕೊಳ್ಳಿ, ಈ ಧಾನ್ಯ ಮತ್ತು ಬೆಲ್ಲವನ್ನು ಸೇವಿಸಿ. (ಎಲ್ಲರೂ ತಮ್ಮ ತಮ್ಮ ಉಡುಪನ್ನು ಬದಲಿಸಿ, ಅವರು ಕೊಟ್ಟ ತಿನಸನ್ನು ಜೇನಿನಲ್ಲಿ ಕಲಿಸಿ ತಿನ್ನುವರು,)

ಬೇಡ—ತಾವು ಯಾರು? ಎಲ್ಲಿಂದ ಬಂದಿದ್ದೀರಿ? ತಮ್ಮನ್ನು ನೋಡಿದರೆ ಶ್ರೀ ವೈಷ್ಣವರ ಹಾಗೆ ಕಾಣುತ್ತಿದ್ದೀರಿ?

ಬ್ರಾಹ್ಮಣ—ನಾವು ಶ್ರೀರಂಗದಿಂದ ಬರುತ್ತಿದ್ದೇವೆ. ನಾವೆಲ್ಲಾ ಶ್ರೀ ರಾಮಾನುಜರ ಶಿಷ್ಯರು.

ಬೇಡ—ತಾವು ಶ್ರೀರಂಗದ ಕಡೆಯಿಂದ ಬಂದಿರುವಿರಾ? ನಮ್ಮ ರಂಗನಾಥ ಕ್ಷೇಮವೇ? ಅವರ ಮುದ್ದು ಕುವರ ರಾಮಾನುಜರು ಕ್ಷೇಮವೇ? ನಾವು ನಲ್ಲಾನ್ ಚಕ್ರವರ್ತಿಗಳ ಶಿಷ್ಯರು.

ರಾಮಾನುಜ—ನೀವು ನಲ್ಲಾನ್ ಚಕ್ರವರ್ತಿಗಳ ಶಿಷ್ಯರೇ ? ಬಹಳ ಸಂತೋಷ. ನಾವು ಚೋಳರಾಜನಿಂದ ತಪ್ಪಿಸಿಕೊಂಡು ಈ ಕಾಡಲ್ಲಿ ಅಲೆಯುತ್ತಿದ್ದೇವೆ. ನಮ್ಮ ಜೊತೆ ಬಂದ ಇನ್ನೂ ಕೆಲವು ವೈಷ್ಣವರು ಎಲ್ಲೋ ತಪ್ಪಿಸಿಕೊಂಡಿದ್ದಾರೆ.

ಬೇಡ—ತಾವು ಚಿಂತಿಸಬೇಡಿ ಅವರೆಲ್ಲಾ ನಮ್ಮ ಬಳಿ ಕ್ಷೇಮವಾಗಿದ್ದಾರೆ.

ರಾಮಾನುಜ—ಸರಿ. ನಮ್ಮ ಜೊತೆ ಬಂದ ವೈಷ್ಣವರು ಇಲ್ಲೇ ಇದ್ದಾರೆ ಎಂದಿರಲ್ಲಾ ! ಎಲ್ಲಿ ಅವರು ?

ಬೇಡರ ಒಡೆಯ—ಭಿಲ್ಲ ಹೋಗಿ ಮೊದಲು ಬಂದ ವೈಷ್ಣವರನ್ನು ಕರೆ ತಾ ?

ಭಿಲ್ಲ—ಆಗಲಿ. (ಭಿಲ್ಲ ಹೋಗಿ ಮೊದಲು ಬಂದ ವೈಷ್ಣವರನ್ನು ಕರೆತರುವನು) ಇಗೋ ವೈಷ್ಣವರು ಬಂದರು

ವೈಷ್ಣವರು—(ರಾಮಾನುಜರು ಮೊದಲಾದವರನ್ನು ನೋಡಿ) ಗುರುಗಳೇ ವಂದಿಸುವೆವು. ತಾವು ಬಂದು ಸೇರಿದಿರಲ್ಲಾ, ನಾವು ತಮಗಾಗಿ ಬಹಳ ಪರಿತಪಿಸುತ್ತಿದ್ದೆವು.

ರಾಮಾನುಜ—ನೀವುಗಳು ಸುರಕ್ಷಿತವಾಗಿದ್ದೀರೆಂದು ಕೇಳಿ ಬಹಳ ಸಂತೋಷವಾಯಿತು. ಬನ್ನಿ ಎಲ್ಲಾ ಕುಳಿತುಕೊಳ್ಳಿ.

ಬೇಡ—ಹೌದು, ತಾವು ಚೋಳರಾಜನಿಂದ ತಪ್ಪಿಸಿಕೊಂಡು ಬಂದ ವೈಷ್ಣವರಲ್ಲವೇ ? ನಮ್ಮ ಎಂಬೆರುಮಾನರು ಎಲ್ಲಿ ? ಸೌಖ್ಯದಿಂದಿರುವರೇ ?

ವೈಷ್ಣವ—ನಿಮಗೆ ಎಂಬೆರುಮಾನರು ಹೇಗೆ ಗೊತ್ತು ?

ಬೇಡ—ನಾವು ನಲ್ಲಾನ್ ಚಕ್ರವರ್ತಿಯ ಶಿಷ್ಯರು. ಅವರು ನಮಗೆಲ್ಲಾ ಕುಲದೈವ. ಎಂಬೆರುಮಾನಾರವರನ್ನು ಯಾವಾಗಲೂ ಧ್ಯಾನಿಸಿ ಎಂದು ಹೇಳಿದ್ದಾರೆ.

ವೈಷ್ಣವ—ನೀವು ಅವರನ್ನು ನೋಡಿದ್ದೀರಾ ?

ಬೇಡ—ಇಲ್ಲ. ಆ ಭಾಗ್ಯಕ್ಕಾಗಿಯೇ ಪರಿತಪಿಸುತ್ತಿದ್ದೇವೆ. ಅವರನ್ನು ನಮಗೆ ತೋರಿಸುವಿರಾ ?

ವೈಷ್ಣವ—(ರಾಮಾನುಜರನ್ನು ತೋರಿಸಿ) ಇಗೋ ಇವರೇ ಎಂಬೆರುಮಾನರು, ಶ್ರೀ ರಾಮಾನುಜರು

ಬೇಡರೆಲ್ಲರೂ (ಅತ್ಯಾಶ್ಚರ್ಯದಿಂದ ನೋಡುವರು) ಎಂಗಳ್ ಎಂಬೆರುಮಾನಾರ್ ಕಡೈತ್ತಾರೆ ! ನಾವೆಲ್ಲಾ ನಿಮಗೆ ವಂದಿಸುತ್ತೇವೆ (ಅಳುತ್ತಾ ವಂದಿಸುವರು)

ರಾಮಾನುಜ—ಏಳಿ ನನ್ನ ಮಕ್ಕಳೇ, ಏಕೆ ಅಳುತ್ತೀರಿ ಏಳಿ. ನನಗೆ ಈಗ ಅಪಾಯವಿಲ್ಲ. (ಎಲ್ಲರೂ ಏಳುವರು)

ಬೇಡರ ಒಡೆಯ—ಬನ್ನಿ ಬೇಡರುಗಳೇ ನಾವು ಈಗ ನಮ್ಮ ಸಂತೋಷವನ್ನು ಕೊಂಡಾಡುವ. (ಎಲ್ಲರೂ ಸಂತೋಷದಿಂದ ಕುಣಿದಾಡುವರು)

ನೋಡಿದೆ ನೋಡಿದೆ ರಾಮಾನುಜರನು ।
ನೋಡಿದೆ ನೋಡಿದೆ ಎಂಬೆರುಮಾನಾರನು ।
ದುಷ್ಟ ಚೋಳನಿಂದ ಬದುಕಿದ ।
ಕ್ರಿಮಿಕಂಠನಿಂದ ಪಾರಾದ । (ನೋಡಿದೆ)

ಎಮ್ಮಯ ದಾತ ಎಮ್ಮಯ ಗುರು ।
ರಂಗನ ಪ್ರಿಯಪುತ್ರ ದಾಶರಥಿಯ ಗುರು ।
ಗೋಷ್ಠಿಪೂರ್ಣ ಯಾದವನ ಶಿಷ್ಯನನು ।
ಮಹಾಪೂರ್ಣ ಯಾಮುನಾಚಾರ್ಯ ಶಿಷ್ಯನನು ।

ಉಬ್ಬಿದ ಹಣೆಯು ಅರಳಿದ ಕಣ್ಣು ।
ಹವಳದ ತುಟಿಯು ತಿದ್ದಿದ ನಾಮದ ಮಣ್ಣು ।
ನೀಡುತಲಿರುವ ಅಭಯದ ಹಸ್ತವು ।
ಪಾಡುತಲಿರುವ ಹರಿನಾಮದ ವದನವು ।

ಬನ್ನಿರಿ ಬನ್ನಿರಿ ಆನಂದಗೊಳ್ಳಿರಿ ।
ಬನ್ನಿರಿ ಬನ್ನಿರಿ ಕುಣಿಯುತ ಬನ್ನಿರಿ ।
ಬನ್ನಿರಿ ಬನ್ನಿರಿ ಬೇಗ ಎಲ್ಲ ಸೇರಿರಿ ।
ಬನ್ನಿರಿ ವೈಷ್ಣವ ವರವ ಪಡೆಯಿರಿ ।

ರಾಮಾನುಜ—ಬೇಡರೇ, ನಾವು ನಿಮ್ಮ ಸತ್ಕಾರಕ್ಕೆ ಮೆಚ್ಚಿದೆವು

ಬೇಡರ ಒಡೆಯ—ತಾವು ನಮ್ಮನ್ನು ವೈಷ್ಣವರಾಗಿ ಮಾಡಬೇಕೆಂದು ಕೋರುತ್ತೇವೆ.

ರಾಮಾನುಜ—ನಿಮ್ಮ ಭಕ್ತಿಗೆ ಮೆಚ್ಚಿ ನಿಮ್ಮ ಕೋರಿಕೆಯನ್ನು ಈಡೇರಿಸುತ್ತೇನೆ. ಪಂಚ ಸಂಸ್ಕಾರಗಳಿಂದ ನಿಮ್ಮನ್ನು ವೈಷ್ಣವರನ್ನಾಗಿ ಮಾಡುತ್ತೇನೆ.

ಒಡೆಯ—ವಂದಿಸುವೆನು ಒಡೆಯ.

ರಾಮಾನುಜ—ನಮಗೆ ಮುಂದೆ ಹೋಗಲು ದಾರಿ ತೋರಿಸಿ.

ಒಡೆಯ—ಭಿಲ್ಲ, ಇವರನ್ನು ಕಾಡು ದಾಟಿಸಿ ಮುಂದಿನ ತೊಂಡನೂರಲ್ಲಿ ಬಿಟ್ಟು ಬಾ.

ಭಿಲ್ಲ—ಆಗಲಿ ವೈಷ್ಣವರೇ ಹೊರಡಿ, ದಾರಿ ತೋರಿಸುವೆನು.

ರಾಮಾನುಜ—ನಾವಿನ್ನು ಬರುತ್ತೇವೆ. (ಎಲ್ಲರೂ ಭಿಲ್ಲನನ್ನು ಹಿಂಬಾಲಿಸುವರು)

(ತೆರೆ ಬೀಳುವುದು)

# ದೃಶ್ಯ—೫

[ಸ್ಥಳ ದೋರಸಮುದ್ರ ಬಿಟ್ಟಿದೇವನ ಅರಮನೆ ಒಳಾಂಗಣ. ರಾಣೀವಾಸದಲ್ಲಿ ಮಹಾರಾಣಿಯವರ ಕೊಠಡಿ ಬಹಳ ಬೆಲೆ ಬಾಳುವ ವಸ್ತುಗಳಿಂದ ಕೋಣೆಯು ಶೃಂಗರಿಸಿರುವುದು ಒಂದು ವಿಶಾಲವಾದ ಪರ್ಯಂಕ. ಅದರ ಮೇಲೆ ಬೆಲೆ ಬಾಳುವ ಹೊದ್ದಿಕೆಗಳು ಹೊದಿಸಿರುವುದು. ಎರಡು ಒರಗು ಪೀಠ ಹಾಕಿರುವುದು ಒಂದುಕಡೆ ಕರೀಮರದ ಕಾಲುಮಣೆ ಇರುವುದು. ಅದರಲ್ಲಿ ದಂತದ ಕೆತ್ತನೆ ಕೆಲಸ ಮಾಡಿರುವುದು ಚಿನ್ನದ ಹೂದಾನಿಯಲ್ಲಿ ಹೂ ಜೋಡಿಸಿರುವುದು ದಾಸ, ದಾಸಿಯರು ಓಡಾಡುತ್ತಿರುವರು ರಾಜನೂ ರಾಣಿಯೂ ಚಿಂತಾಕ್ರಾಂತರಾಗಿ ಒರಗು ಪೀಠದ ಮೇಲೆ ಕುಳಿತಿರುವರು. ಇಬ್ಬರು ದಾಸಿಯರು ಚಾಮರ ಬೀಸುತ್ತಿರುವರು.

ರಾಜ—ಮಹಾರಾಣಿ, ನಮ್ಮ ಪುತ್ರಿ ಚಂಪಕ ಹೇಗಿರುವಳು ?

ರಾಣಿ—ಹಾಗೆಯೇ ಇರುವಳು.

ರಾಜ—ಆ ಮಂತ್ರವಾದಿಯಿಂದ ಮಾಡಿಸಿದ ಔಷಧಿಯಿಂದಲೂ ಸ್ವಲ್ಪವೂ ಗುಣಮುಖವಾಗಲಿಲ್ಲವೇ ?

ರಾಣಿ—ಇಲ್ಲ ಆರ್ಯಪುತ್ರ, ಯಾವುದಕ್ಕೂ ಜಗ್ಗದ ರೋಗವಾಗಿದೆಯಲ್ಲಾ. ಏನು ಮಾಡುವುದು ? ದಿಕ್ಕೇ ತೋಚುತ್ತಿಲ್ಲ (ಇಬ್ಬರೂ ಯೋಚಿಸುತ್ತಾ ಮೌನವಾಗಿ ಕುಳಿತುಕೊಳ್ಳುವರು, (ಯೋಚಿಸುತ್ತಾ) ಒಬ್ಬ ದಾಸಿ ಬಂದು.

ದಾಸಿ—ಮಹಾರಾಜ, ರಾಣಿಯರಿಗೆ ವಂದಿಸುವೆನು

ರಾಣಿ—ಏನು ಸಮಾಚಾರ ಮಾಲಿನಿ ?

ದಾಸಿ—ಶ್ರೀಮಾನ್, ತೊಂಡನೂರು ನಂಬಿಯುವರು ಬಂದಿರುವರು.

ರಾಣಿ—ಅವರನ್ನು ಮರ್ಯಾದೆಯಿಂದ ಕರೆದುಕೊಂಡು ಬಾ. (ದಾಸಿ ಹೋಗಿ ತೊಂಡನೂರು ನಂಬಿಯುವರನ್ನು ಕರೆತರುವಳು ರಾಜ, ರಾಣಿ ಚಿಂತಾಕ್ರಾಂತರಾಗಿರುವರು)

ತೊಂಡನೂರು ನಂಬಿ—ರಾಜಾಧಿರಾಜ, ರಾಣಿಯುವರಿಗೆ ಮಂಗಳವಾಗಲಿ

ಇಬ್ಬರೂ—ದಯಮಾಡಿಸಿ. ನಾವು ತಮಗೆ ವಂದಿಸುವೆವು ಈ ಪೀಠವನ್ನಲಂಕರಿಸಿ.

ತೊಂಡನೂರು ನಂಬಿ—(ಕುಳಿತು) ಶುಭವಾಗಲಿ (ಸ್ವಲ್ಪ ಹೊತ್ತು ಇಬ್ಬರನ್ನೂ ನೋಡಿ) ಏಕೆ ಇಂದು ಚಿಂತೆಯಲ್ಲಿ ಮುಳುಗಿರುವಿರಿ ?

ರಾಣಿ—ಏನು ಹೇಳಲಿ ನಂಬಿಗಳೇ, ನಮ್ಮ ಕುವರಿ ಚಂಪಕನ ಖಾಯಿಲೆ ಗುಣಮುಖವಾಗಿಲ್ಲವಲ್ಲಾ ? ಎಷ್ಟು ಔಷಧೋಪಚಾರಗಳು ಆದವು !

ನಂಬಿ—ನಿನ್ನೆ ಮಾಂತ್ರಿಕರು ಬಂದು ಚಿಕಿತ್ಸೆ ಮಾಡಿದರೆಂದು ಕೇಳಿದೆ !

ರಾಜ—ಅದರಿಂದಲೂ ಏನೂ ಗುಣ ಕಾಣಲಿಲ್ಲ.

ರಾಣಿ—ನಮ್ಮ ಕುವರಿಯ ಜೀವನ ಹೀಗೆಯೇ ಏನೋ! ನಮಗೆ ಪುತ್ರಿ ಇದ್ದೂ ಇಲ್ಲದಂತಾಗಿದೆ.

ನಂಬಿ—ಮಹಾರಾಣಿಯವರೇ, ದುಃಖಿಸಬೇಡಿ. ಈಗ ನಮ್ಮ ಆಚಾರ್ಯರಾದ ರಾಮಾನುಜರು ಇಲ್ಲಿ ದಯಮಾಡಿಸಿರುವರು,

ರಾಣಿ—ನಿಮಗೆ ಆಚಾರ್ಯರಾದರೆ ನಮಗೇನು ?

ನಂಬಿ—ಹಾಗೆನ್ನಬೇಡಿ.

ರಾಣಿ—ಅದರಲ್ಲೂ ಶ್ರೀ ವೈಷ್ಣವರಿಂದ ನಮಗೇನು ಪ್ರಯೋಜನ ? ನಾವು ಜೈನರು.

ನಂಬಿ—ನಮ್ಮ ಆಚಾರ್ಯರಿಗೆ ಮತಭೇದವಿಲ್ಲ. ಜೈನರು, ವೈಷ್ಣವರು ಎಂಬ ಭೇದಭಾವ ಇಲ್ಲ. ಎಲ್ಲರನ್ನೂ ತಮ್ಮವರೆಂದೇ ಕಾಣುವರು.

ರಾಣಿ—ಯಾರಿಂದಲೂ ಸಾಧ್ಯವಾಗದ ಈ ಖಾಯಿಲೆಯನ್ನು ಇವರು ಹೇಗೆ ಹೋಗಲಾಡಿಸುವರು ?

ನಂಬಿ—ತಾಯಿ, ಅದು ವ್ಯಾಧಿಯೇ ಅಲ್ಲವೆಂದು ಕಾಣುತ್ತೆ.

ರಾಜ—ಮತ್ತೇನು ?

ನಂಬಿ—ವ್ಯಾಧಿಯಾಗಿದ್ದರೆ ನೀವು ಮಾಡಿಸಿದ ಇಷ್ಟೊಂದು ಚಿಕಿತ್ಸೆಯಿಂದ ವಾಸಿ ಆಗುತ್ತಿತ್ತು. ಅದು ಪಿಶಾಚಿಯ ಪ್ರಭಾವ ಎಂದು ಕಾಣುತ್ತೆ.

ರಾಜ—ರಾಮಾನುಜರು ಹೇಗೆ ಪಿಶಾಚಿಯನ್ನು ಬಿಡಿಸುವರು ?

ನಂಬಿ—ಮಹಾರಾಜ ಪಿಶಾಚಿಯೇನು, ಇದಕ್ಕಿಂತಲೂ ಪ್ರಬಲವಾದ ಬ್ರಹ್ಮರಾಕ್ಷಸನನ್ನೇ ಬಿಡಿಸಿರುವರು.

ರಾಣಿ—ಹಾಗೆಯೇ! ಯಾವ ಬ್ರಹ್ಮ ರಾಕ್ಷಸ ?

ನಂಬಿ—ಕೆಲವು ವರ್ಷಗಳ ಹಿಂದೆ ಚಿದಂಬರದಲ್ಲಿದ್ದ ಚೋಳರಾಜನ ಮಗಳಿಗೆ ಬ್ರಹ್ಮ ರಾಕ್ಷಸ ಹಿಡಿದಿತ್ತು. ಅದನ್ನು ರಾಮಾನುಜರ ಗುರುಗಳಾದ ಯಾದವರು ಬಿಡಿಸಲು ಪ್ರಯತ್ನಿಸಿದರು.

ರಾಣಿ—ಬ್ರಹ್ಮರಾಕ್ಷಸ ಬಿಟ್ಟಿತೇ ?

ನಂಬಿ—ಆ ಬ್ರಹ್ಮರಾಕ್ಷಸ, ನನ್ನ ಮುಂದೆ ಯಾದವರಿಂದೇನೂ ನಡೆಯದು. ರಾಮಾನುಜರು ತಮ್ಮ ಪಾದಗಳನ್ನು ನನ್ನ ಶಿರಸ್ಸಿನ ಮೇಲೆ ಇಟ್ಟರೆ, ನಾನು ಹೊರಟು ಹೋಗುವೆ, ಎಂದು ಹೇಳಿತು.

ರಾಜ—ಆಗ ರಾಮಾನುಜರು ಏನು ಮಾಡಿದರು ?

ನಂಬಿ—ತಮ್ಮ ಗುರುಗಳ ಆಜ್ಞೆ ಪಡೆದು ತಮ್ಮ ಪಾದವನ್ನು ಅದರ ತಲೆಯಮೇಲಿಡಲು, ಅದು ಚಟ, ಚಟ ಎಂದು ಶಬ್ದ ಮಾಡುತ್ತಾ ರಾಮಾನುಜರಿಗೆ ನಮಸ್ಕರಿಸಿ ಹೊರಟು ಹೋಯಿತು.

ರಾಣಿ—ಹಾಗೇನು! ಹಾಗಾದರೆ ಮೊದಲು ಕರೆಸಬೇಕು. ಆರ್ಯಪುತ್ರ, ಅವರನ್ನು ಕರೆಸೋಣವೇ?

ರಾಜ—ಆಗಲಿ ಕರೆಸೋಣ.

ನಂಬಿ—(ಆಶೀರ್ವದಿಸಿ) ನನಗೆ ಭಿಕ್ಷೆ ನೀಡಿ. ನಾನಿನ್ನು ಬರುವೆನು. ಮಹಾರಾಣಿಯು ಭಿಕ್ಷೆ ನೀಡುವಳು. ನಂಬಿ ಹೊರಡುವರು.

(ತೆರೆ ಬೀಳುವುದು)

## ದೃಶ್ಯ—೬

[ಸ್ಥಳ ಅದೇ ಅಂತಃಪುರ ರಾಜ ಹಾಗೂ ರಾಣಿ ಮಾತನಾಡುತ್ತಿರುವರು.]

ರಾಜ—ಮಹಾರಾಣಿ, ನಾವು ನಾಳೆ ನಮ್ಮ ಜೈನ ಗುರುಗಳನ್ನು ಭಿಕ್ಷೆಗೆ ಆಹ್ವಾನಿಸಬೇಕೆಂದಿದ್ದೇವೆ.

ರಾಣಿ—ತಮ್ಮ ಅಭಿಪ್ರಾಯವೇನೋ ಒಳ್ಳೆಯದು ಆದರೆ ಅವರು ಬರಬೇಕಲ್ಲಾ.

ರಾಜ—ಏಕೆ ಬರುವುದಿಲ್ಲ? ನಾನು ರಾಜ. ನಾನು ಕರೆದರೆ ಅವರು ಬರುವುದಿಲ್ಲವೇ?

ರಾಣಿ—ನನಗೇನೋ ಅನುಮಾನ.

ರಾಜ—ಏಕೆ?

ರಾಣಿ—ತಾವು ಅಂಗಹೀನರು. ಅವರು ಜೈನ ಸನ್ಯಾಸಿಗಳು. ಜೈನ ಸನ್ಯಾಸಿಗಳು ಅಂಗಹೀನರ ಬಳಿ ಭಿಕ್ಷೆಯನ್ನು ಸ್ವೀಕರಿಸುವುದಿಲ್ಲ.

ರಾಜ—ನೋಡೋಣ. ನಾನು ಕರೆ ಕಳುಹಿಸುತ್ತೇನೆ. ಏನು ಹೇಳುವರೋ ನೋಡೋಣ.

ರಾಣಿ—ತಮ್ಮ ಚಿತ್ತದಂತೆಯೇ ನಡೆಯಲಿ

ರಾಜ—ಯಾರಲ್ಲಿ? ದೂತನನ್ನು ಕರೆ (ಒಬ್ಬ ದಾಸಿ ಹೋಗಿ ದೂತನನ್ನು ಕರೆ ತರುವಳು) ದೂತ, ಈಗಲೇ ಹೋಗಿ ನಮ್ಮ ಗುರುಗಳಾದ ಜೈನ ಗುರುಗಳನ್ನು ನಾಳೆ ನಮ್ಮಲ್ಲಿಗೆ ಭಿಕ್ಷೆಗೆ ಬರಹೇಳಿದೆನೆಂದು ತಿಳಿಸಿ ಬಾ.

ದೂತ—ಆಗಲಿ, ಈಗಲೇ ತಿಳಿಸಿ ಬರುವೆನು. (ಹೋಗುವನು)

ರಾಜ—ಚಂಪಕಳಿಗೆ ಏನಾದರೂ ಗುಣವು ಕಂಡು ಬಂದಿದೆಯೋ?

ರಾಣಿ—(ಕಣ್ಣೀರನ್ನು ಸುರಿಸುತ್ತಾ) ಇಲ್ಲಾ ಸ್ವಾಮಿ, ದಿನದಿನಕ್ಕೆ ಅಧಿಕವಾಗುತ್ತಿರುವುದು. ಅವಳ ಕೂಗಾಟ, ಅರಚಾಟ, ಕಿವಿಯಿಂದ ಕೇಳಲಾಗುತ್ತಿಲ್ಲ. ಹತ್ತು ಜನ ದಾಸಿಯರು ಹಿಡಿದರೂ ಕೊಡವಿಕೊಂಡು ಹುಚ್ಚುಚ್ಚಾಗಿ ಕೂಗಾಡುತ್ತಾಳೆ.

ರಾಜ—ಏನೊಂದೂ ತಿಳಿಯುವುದೇ ಇಲ್ಲವಲ್ಲಾ! (ದೂತ ಬರುವನು) ನಮಸ್ಕರಿಸುವನು.

ರಾಜ—ಏನು ಹೇಳಿದರು?

ದೂತ—ಅವರು ಬರಲಾಗುವುದಿಲ್ಲವಂತೆ.

ರಾಜ—ಏಕೆ ?

ದೂತ—ತಾವು ಅಂಗಹೀನರಂತೆ. ತಮ್ಮಲ್ಲಿ ಭಿಕ್ಷೆ ಸ್ವೀಕರಿಸುವುದು ಶಾಸ್ತ್ರ ವಿರುದ್ಧವಂತೆ.

ರಾಜ—ಹಾಗೆಯೇ, ಎಂತಹ ಅವಮಾನ ಮಾಡಿದರು ? ದೂತ, ನೀನು ಇನ್ನು ಹೊರಡು

ರಾಣಿ—ಮಹಾರಾಜ, ನನ್ನದೊಂದು ಅರಿಕೆ

ರಾಜ—ಏನು ?

ರಾಣಿ—ಹೇಗೂ ರಾಮಾನುಜರನ್ನು ಕರೆಸಬೇಕೆಂದಿದ್ದೇವೆ. ಏಕೆ ಅವರನ್ನೇ ಭಿಕ್ಷೆಗೆ ಕರೆಸಬಾರದು ? ಈಗ ಕರೆಸಿದರೆ ನಮ್ಮ ಪುತ್ರಿಗೂ ಚಿಕಿತ್ಸೆ ಮಾಡಿಸಬಹುದು.

ರಾಜ—ಬಹಳ ಒಳ್ಳೆಯ ಸಲಹೆ, ಕರೆ ಕಳುಹಿಸಿ ನೋಡೋಣ, ದೂತ, ಈಗಲೇ ಹೋಗಿ ತೊಂಡನೂರು ನಂಬಿಯವರನ್ನು ಕರೆತಾ

ದೂತ—ಅಪ್ಪಣೆ (ಹೋಗುವನು) ನಂಬಿಯೊಡನೆ ಬರುವನು

ನಂಬಿ—ಏನು ಮಹಾರಾಜ ?

ರಾಜ—ನಂಬಿಗಳೇ, ಶ್ರೀ ರಾಮಾನುಜರನ್ನು ನಾಳೆ ನಮ್ಮಲ್ಲಿ ಭಿಕ್ಷೆಗೆ ಕರೆತರುವವರಾಗಿ.

ನಂಬಿ—ಆಗಲಿ, ಈಗಲೇ ಹೋಗಿ ತಿಳಿಸುವೆನು (ಹೋಗುವರು)

ರಾಜ—ರಾಣಿ, ನಾವು ಬರುವೆವು ನಾಳಿನ ಭಿಕ್ಷೆಗೆ ಏರ್ಪಾಡು ಮಾಡುವುದಿದೆ

ರಾಣಿ—ಆಗಲಿ. (ರಾಜ ಹೊರಡುವನು ರಾಣಿ ಸ್ವಲ್ಪ ಹೊತ್ತು ಆ ಕಡೆಯೇ ನೋಡುತ್ತಿದ್ದು) ಹೇ ರಾಮಾನುಜ ! ನೀನೇ ನಮ್ಮ ಕುಮಾರಿಯನ್ನು ರಕ್ಷಿಸುವವನಾಗು, ಎಂದು ಪ್ರಾರ್ಥಿಸುವಳು.

(ತೆರೆ ಬೀಳುವುದು)

## ದೃಶ್ಯ—೭

[ಸ್ಥಳ ರಾಮಾನುಜರು ತಂಗಿರುವ ನರಸಿಂಹಸ್ವಾಮಿ ದೇವಸ್ಥಾನ ರಾಮಾನುಜರೂ, ಅವರ ಶಿಷ್ಯರೂ ಮಾತನಾಡುತ್ತಿರುವರು.]

ರಾಮಾನುಜ—ಈ ಪ್ರಾಂತ್ಯದಲ್ಲೂ ಜೈನರ ಪ್ರಾಬಲ್ಯವೇ ಅಧಿಕವಾಗಿದೆಯಲ್ಲಾ ?

ಒಬ್ಬ ಶಿಷ್ಯ—ಹೌದು ಗುರುಗಳೇ ಅವರಿಂದ ನಮ್ಮ ಮತ ಪ್ರಚಾರವೂ ಕಡಿಮೆಯಾಗುತ್ತಿದೆ. ಗುರುಗಳೇ, ಮತ್ತೊಂದು ವಿಷಯ ಕೇಳಿದಿರಾ ?

ರಾಮಾನುಜ—ಏನು ವಿಷಯ ?

ಶಿಷ್ಯ—ಇಲ್ಲಿಯ ರಾಜ ಬಿಟ್ಟಿದೇವನು ತಮ್ಮ ಜೈನ ಗುರುಗಳನ್ನು ಭಿಕ್ಷೆಗೆ ಕರೆದನಂತೆ ಆದರೆ,

ರಾಮಾನುಜ—ಏನು ಆದರೆ, ಎಂದರೆ ?

ಶಿಷ್ಯ—ಅವರು ಅವನ ಒಳ್ಳೆ ಭಿಕ್ಷೆಯನ್ನು ಸ್ವೀಕರಿಸಲು ಒಪ್ಪಲಿಲ್ಲವಂತೆ

ರಾಮಾನುಜ—ಅದಕ್ಕೆ ಕಾರಣ ?

ಶಿಷ್ಯ—ರಾಜನು ಹಿಂದೆ ಯುದ್ಧವನ್ನು ಮಾಡಿದಾಗ, ಒಂದು ಬೆಟ್ಟು ಕತ್ತರಿಸಲ್ಪಟ್ಟಿತಂತೆ.

ರಾಮಾನುಜ—ಅದಕ್ಕೆ ಏನು ?

ಶಿಷ್ಯ—ಜೈನ ಶಾಸ್ತ್ರದಂತೆ ಅಂಗಹೀನರ ಬಳಿ ಭಿಕ್ಷೆ ಸ್ವೀಕರಿಸಬಾರದಂತೆ.

ರಾಮಾನುಜ—ಅದಕ್ಕೆ ನಿರಾಕರಿಸಿದರಾ ?

ಶಿಷ್ಯ—ಹೌದು ಗುರುಗಳೇ

ಮತ್ತೊಬ್ಬ ಶಿಷ್ಯ—(ಒಳಗೆ ಬಂದು) ತೊಂಡನೂರು ನಂಬಿಯವರು ಬಂದಿರುವರು. ತಮ್ಮನ್ನು ಕಾಣಬೇಕಂತೆ.

ರಾಮಾನುಜ—ಅವರನ್ನು ಇಲ್ಲಿಗೆ ಕರೆತನ್ನಿ (ಶಿಷ್ಯರು ಹೋಗಿ ನಂಬಿಯೊಡನೆ ಬರುವರು)

ನಂಬಿ—(ನಮಸ್ಕರಿಸಿ) ಪೂಜ್ಯರೇ ತಾವು ಕ್ಷೇಮವೇ ?

ರಾಮಾನುಜ—ಕುಶಲವಾಗಿದ್ದೇವೆ. ತಾವು ಇಲ್ಲಿಗೆ ಬಂದ ಕಾರಣ ?

ನಂಬಿ—ತಮ್ಮನ್ನೂ, ತಮ್ಮ ಶಿಷ್ಯರನ್ನೂ, ರಾಜನಾದ ಬಿಟ್ಟಿದೇವನು ಭಿಕ್ಷೆಗೆ ಕರೆತರಲು ಕಳುಹಿಸಿರುವನು.

ರಾಮಾನುಜ—ನಾವು ದೇಶಾಂತರಿಗಳಾಗಿ ಬಂದಿದ್ದೇವೆ, ಹೇಗೆ ಅರಮನೆಯೊಳಗೆ ಹೋಗುವುದು ? ಅದೂ ಅಲ್ಲದೆ ಅವರು ಜೈನ ಮತದವರು

ನಂಬಿ—ತಮಗೆ ಮತಭೇದವಿಲ್ಲವಲ್ಲಾ. ಯಾವ ಭಕ್ತರು ಶರಣಾಗತರಾಗುವರೋ ಅವರಲ್ಲಿ ಭಿಕ್ಷೆ ಸ್ವೀಕರಿಸುವಿರಲ್ಲಾ.

ರಾಮಾನುಜ—ಹೌದು. ಆದರೆ ನನಗೆ ಅಲ್ಲಿ ಹೋಗಲು ಇಷ್ಟವಿಲ್ಲವಲ್ಲಾ. ಒಬ್ಬ ಶೈವ ರಾಜನ ಕೋಪಕ್ಕೆ ಪಾತ್ರರಾಗಿ ತಪ್ಪಿಸಿಕೊಂಡು ಓಡಿ ಬಂದಿದ್ದೇವಲ್ಲಾ. ಈ ಜೈನ ರಾಜನು ಹೇಗೋ ?

ನಂಬಿ—ಸ್ವಾಮಿ, ತಾವು ಅನುಮಾನಿಸಬೇಡಿ. ಈ ರಾಜನು ಪ್ರಬಲನಾಗಿರುವನು. ಇವನನ್ನು ತಮ್ಮ ಶಿಷ್ಯನನ್ನಾಗಿ ಸ್ವೀಕರಿಸಿದರೆ, ಮುಂದೆ ಶ್ರೀ ವೈಷ್ಣವ ಮತ ಪ್ರಚಾರದಲ್ಲಿ ಬಹಳ ಸಹಾಯವಾಗುವುದು.

ಮತ್ತೆಲ್ಲಾ ಶಿಷ್ಯರು—ಹೌದು ಗುರುಗಳೇ, ನಂಬಿಗಳು ಹೇಳುವುದು ಒಳ್ಳೆಯದು. ಇದರಲ್ಲಿ ನಮಗೆ ಸಹಾಯವಿರುವುದು, ನಾವು ಹೋಗೋಣ.

ರಾಮಾನುಜ—ತಾವೆಲ್ಲಾ ಒಪ್ಪುವುದಾದರೆ ಹೋಗೋಣ. ನಂಬಿಗಳೇ ನಡೆಯಿರಿ, ರಾಜನ ಅರಮನೆಗೆ ಹೋಗೋಣ (ಎಲ್ಲರೂ ತೆರಳುವರು)

(ತೆರೆ ಬೀಳುವುದು)

## ದೃಶ್ಯ—೮

[ಬಿಟ್ಟಿದೇವನ ಆಸ್ಥಾನ—ಬಿಟ್ಟಿದೇವ ಸಿಂಹಾಸನದ ಮೇಲೆ ಕುಳಿತಿರುವನು. ಮಂತ್ರಿಗಳೂ, ವಂದಿಮಾಗಧರೂ, ರಾಜಸಭಾಸದರೂ, ವಿದ್ವಾಂಸರೂ, ತಮ್ಮ ತಮ್ಮ ಸ್ಥಾನದಲ್ಲಿ ಆಸೀನರಾಗಿ ಕುಳಿತಿರುವರು ಒಬ್ಬ ದೂತ ಬಂದು]

ದೂತ—(ನಮಸ್ಕರಿಸಿ) ಪ್ರಭುಗಳೇ, ರಾಮಾನುಜರೂ, ಅವರ ಶಿಷ್ಯರೂ ಬಂದಿರುವರು.

ರಾಜ—ಅವರನ್ನು ಮರ್ಯಾದೆಯಿಂದ ಕರೆತನ್ನಿ (ದೂತ ಹೋಗುವನು ಎಲ್ಲರೂ ಬರುವರು )

ನಂಬಿ—ಮಹಾರಾಜನೇ ಶ್ರೀಮಾನ್ ರಾಮಾನುಜರು ಆಗಮಿಸಿರುವರು.

ಮಹಾರಾಜ—ಆಚಾರ್ಯರೇ, ವಂದಿಸುವೆನು. ಈ ಪೀಠವನ್ನಲಂಕರಿಸಿ ಪೂಜ್ಯರೇ ತಾವುಗಳೂ ಈ ಆಸನಗಳನ್ನು ಅಲಂಕರಿಸಿ. ಮಂತ್ರಿಗಳೇ, ಗುರುಗಳಿಗೆ ಅರ್ಘ್ಯ ಪಾದ್ಯಗಳನ್ನು ತರಿಸಿ (ಅರ್ಘ್ಯ ಪಾದ್ಯ ಬರುವುದು. ಮಹಾರಾಜನು ಅರ್ಘ್ಯ ಪಾದ್ಯವನ್ನು ನೀಡುವನು.)

ರಾಮಾನುಜ—ಮಹಾರಾಜ, ನಮ್ಮನ್ನು ಕರೆಸಿದ ನಿಮಿತ್ತವೇನು ?

ಮಹಾರಾಜ—ತಮ್ಮಲ್ಲಿ ನನ್ನದೊಂದು ಅರಿಕೆ ಇರುವುದು

ರಾಮಾನುಜ—ಏನು ಅರಿಕೆ ?

ಮಹಾರಾಜ—ನಮ್ಮ ಸುಕುಮಾರಿಯಾದ ಚಂಪಕಳು ಶರೀರಾರೋಗ್ಯವಿಲ್ಲದೆ ನರಳಾಡುತ್ತಿರುವಳು ಯಾವ ಯಾವ ವೈದ್ಯರಿಂದಲೂ ಗುಣಮುಖವಾಗಲಿಲ್ಲ.

ನಂಬಿ—ಆಚಾರ್ಯರೇ, ನನ್ನ ಅಭಿಪ್ರಾಯದಲ್ಲಿ ಅದು ವ್ಯಾಧಿಯೇ ಅಲ್ಲ. ಪಿಶಾಚಿಯ ಪ್ರಭಾವ ಎಂದು ಕಾಣುತ್ತೆ.

ರಾಮಾನುಜ—ಮಹಾರಾಜ, ಅವಳನ್ನು ಇಲ್ಲಿ ಕರೆಸಿ ನೋಡೋಣ.

ರಾಜ—ಚೇಟಿ, ಹೋಗಿ ರಾಜಕುಮಾರಿಯನ್ನು ಇಲ್ಲಿಗೆ ಕರೆತರುವಂತೆ ಮಹಾರಾಣಿಯವರಿಗೆ ತಿಳಿಸು. (ಚೇಟಿಯು ಹೋಗುವಳು.) (ಸ್ವಲ್ಪ ಹೊತ್ತಿನಲ್ಲಿ ರಾಜಕುಮಾರಿಯೂ, ಕೆಲವು ದಾಸಿಯರೂ ಮಹಾರಾಣಿಯ ಜೊತೆ ಬರುವರು.) (ರಾಜಕುಮಾರಿ ಬಹಳ ಸುಂದರಿಯಾಗಿರುವಳು. ಕಣ್ಣುಗಳು ಕಾಂತಿಯಿಂದ ಕೂಡಿರುವುವು. ಕೂದಲು ಬಿಚ್ಚಿರುವುದು. ತಲೆಯನ್ನು ತಿರುಗಿಸುತ್ತಾ, ದುರುದುರನೆ ನೋಡುತ್ತಾ, ಬರುವಳು. ಅವಳ ವಸ್ತ್ರವು ಹರಿದಿರುವುದು ಮತ್ತು ಅಸ್ತವ್ಯಸ್ತವಾಗಿರುವುದು. ದಾಸಿಯರು ಅವಳ ಕೈಗಳನ್ನು ಹಿಡಿದಿರುವರು )

ರಾಜಕುಮಾರಿ—ಬಿಡೆ, ಬಿಡೆ, ನನ್ನ ಕೈ ಬಿಡೆ. ಏ . ನಾನು ರಾಜಕುಮಾರಿ, ನನ್ನನ್ನು ಮುಟ್ಟಬಾರದು, (ಎಂದು ಒದರಾಡುವಳು. ಸಖಿಯರು ಹೆದರಿ

ಕೈ ಬಿಡುವರು ರಾಜಕುಮಾರಿ ಹಾ . ಹೂ ಎಂದು ಕಿರುಚಾಡುತ್ತಾ ಸಭೆಯಲ್ಲಿ ಓಡಾಡುವಳು.)

**ರಾಜ**—ಗುರುವರ್ಯರೇ ಇವಳೇ ನನ್ನ ಸುಕುಮಾರಿ.

**ರಾಣಿ**—ಪೂಜ್ಯರೇ, ಹೇಗಾದರೂ ನನ್ನ ಕುವರಿಯನ್ನು ರಕ್ಷಿಸಿ ಎಂದು ರಾಮಾನುಜರ ಪಾದಗಳನ್ನು ಹಿಡಿದು ನಮಸ್ಕರಿಸಿ ಅಳುವಳು.

**ರಾಜಕುಮಾರಿ**—ಒಬ್ಬೊಬ್ಬರ ಹತ್ತಿರವೂ ಹೋಗುತ್ತಾ, ಏನೇನೋ ಮಾತಾಡುತ್ತಾ ರಾಜನ ಬಳಿ ಬರುವಳು ಸ್ವಲ್ಪ ಹೊತ್ತು ನೋಡಿ, ಏ ನೀನು ರಾಜನಾ ಹ ಹ್ಹ ಹ್ಹ ರಾಜ ಅಂತೆ ರಾಜ ಆ ಹ್ಹ ಹ್ಹ ಹ್ಹ . (ರಾಮಾನುಜರ ಬಳಿ ಬಂದು) ದುರದುರನೆ ನೋಡುತ್ತಾ, ಹಾಗೇ ತಲೆಯನ್ನು ತಗ್ಗಿಸುವಳು ರಾಮಾನುಜರು ಅವಳನ್ನು ನೋಡುವರು.

**ರಾಮಾನುಜ**—ನಂಬಿಯವರೇ, ನನ್ನ ಪಾದಗಳನ್ನು ತೊಳೆದು ಪಾದೋದಕವನ್ನು ರಾಜಕುಮಾರಿಯ ತಲೆಯ ಮೇಲೆ ಪ್ರೋಕ್ಷಿಸಿ (ನಂಬಿಯವರು ಉದಕವನ್ನು ತರಿಸಿ, ರಾಮಾನುಜರ ಪಾದ ಪೂಜೆ ಮಾಡಿ, ಆ ತೀರ್ಥವನ್ನು ರಾಜಕುಮಾರಿಯ ತಲೆಯ ಮೇಲೆ ಪ್ರೋಕ್ಷಿಸುವರು. ರಾಜಕುಮಾರಿ ಗಡಗಡನೆ ನಡುಗುತ್ತಾ ಪೂಜ್ಯರೇ ನಾನು ಹೋದೆ, ನಾನು ಹೋದೆ, ಎಂದು ಕೂಗಿಕೊಳ್ಳುತ್ತಾ ಆಯತಪ್ಪಿ ಬೀಳುವಳು. ಎಲ್ಲರೂ ದಿಗ್ಭ್ರಾಂತಿಯಿಂದ ನೋಡುತ್ತಿರುವರು (ರಾಜಮಾತೆಯು ಓಡಿಹೋಗಿ ತೊಡೆಯ ಮೇಲೆ ಮಲಗಿಸಿಕೊಳ್ಳುವರು,) ಸ್ವಲ್ಪ ಹೊತ್ತಿಗೆ ನಿದ್ದೆಯಿಂದ ಎಚ್ಚೆತ್ತವಳಂತೆ ಎದ್ದು, ಸುತ್ತಲೂ ನೋಡಿ, ತನ್ನ ಅಸ್ತವ್ಯಸ್ತವಾದ ಉಡುಪನ್ನು ನೋಡಿಕೊಂಡು ನಾಚಿಕೆಯಿಂದ ಒಳಗೆ ಓಡುವಳು ದಾಸಿಯರೂ ಒಳಗೆ ಹೋಗುವರು.)

**ರಾಜದಂಪತಿಗಳು**—(ರಾಮಾನುಜರ ಪಾದಗಳಿಗೆ ನಮಸ್ಕರಿಸಿ, ಪಾದಗಳನ್ನು ಹಿಡಿದು ಗುರುಗಳೇ, ನಾವು ಧನ್ಯರಾದೆವು ನಮ್ಮನ್ನು ರಕ್ಷಿಸಿದಿರಿ ನಾವು ಶ್ರೀ ವೈಷ್ಣವರಾಗಲು ಇಚ್ಛಿಸುತ್ತೇವೆ

**ರಾಮಾನುಜ**—ಹಾಗೇ ಆಗಲಿ. ಶ್ರೀರಂಗನಾಥನ ಅನುಗ್ರಹವು ತಮಗುಂಟಾಗಲಿ. ಪಂಚಸಂಸ್ಕಾರಗಳಿಂದ ತಮ್ಮನ್ನು ಪುನೀತರನ್ನಾಗಿ ಮಾಡುವೆನು.

(ರಾಜಕುಮಾರಿ ವಸ್ತ್ರಾಲಂಕಾರ ಭೂಷಿತಳಾಗಿ ಬಂದು ರಾಮಾನುಜರಿಗೆ ನಮಸ್ಕರಿಸಿ)

**ರಾಜಕುಮಾರಿ**—ಗುರುಗಳೇ, ನನ್ನನ್ನು ಕಾಪಾಡಿ, ನನ್ನನ್ನು ಕಾಪಾಡಿ.

**ರಾಮಾನುಜ**—ಮಗೂ ಏಳಮ್ಮ, ಭಗವಂತನಾದ ನಾರಾಯಣನು ಕಾಪಾಡುವನು.

ರಾಜ—ಮಹಾರಾಣಿ, ಚಂಪಾ ನೀವುಗಳೂ ಪೀಠವನ್ನಲಂಕರಿಸಿ. ಈ ಸಂತೋಷಕ್ಕಾಗಿ ನಮ್ಮ ರಾಜ ನರ್ತಕಿಯರು ನರ್ತನ ಮಾಡಲಿ. ದೂತರೇ, ರಾಜ ನರ್ತಕಿಯರನ್ನು ಕರೆತನ್ನಿ.

ದೂತ—(ಹೋಗಿ ಕರೆತಂದು) ಮಹಾಸ್ವಾಮಿಗಳೇ, ನರ್ತಕಿಯರು ಬಂದಿರುವರು.

(ನರ್ತಕಿಯರು ರಾಜನಿಗೆ ನಮಸ್ಕರಿಸುವರು.)

ರಾಜ—ಆಗಲಿ, ನರ್ತನವು ಪ್ರಾರಂಭವಾಗಲಿ.

(ರಾಜ ನರ್ತಕಿಯರು ನರ್ತಿಸುವರು. ಪಕ್ಕವಾದ್ಯಗಳು ಮೊಳಗುವುವು.)

ರಾಜ—ಪೂಜ್ಯರೇ, ಈಗ ಭಿಕ್ಷೆಯನ್ನು ಸ್ವೀಕರಿಸೋಣವಾಗಲಿ ಬನ್ನಿ, ಹೋಗೋಣ.

(ವಂದಿಮಾಗಧರು ಪರಾಕ್ ಹೇಳುತ್ತಿರುವರು ಎಲ್ಲರೂ ಹೋಗುವರು.)

(ತೆರೆ ಬೀಳುವುದು)

## ದೃಶ್ಯ—೬

[ಜೈನರ ಮಠ, ಜೈನರ ಗುರುಗಳು ಮತ್ತು ಅನೇಕ ಜೈನ ಶಿಷ್ಯರು ಮಾತನಾಡುತ್ತಿರುವರು.]

ಒಬ್ಬ ಕ್ಷಪಣಕ—ಗುರುಗಳೇ, ನಾವು ರಾಜನ ಭಿಕ್ಷೆಯನ್ನು ನಿರಾಕರಿಸಿ ತಪ್ಪು ಮಾಡಿದೆವು.

ಗುರುಗಳು—ಏಕೆ ? ಏನು ತಪ್ಪಾಯಿತು ?

ಕ್ಷಪಣಕ—ರಾಜನು ಆ ಸನ್ಯಾಸಿ ರಾಮಾನುಜನನ್ನು ಕರೆಸಿ ಭಿಕ್ಷೆ ಇತ್ತನಂತೆ.

ಗುರು—ಏನು ! ವೈಷ್ಣವ ಗುರು ಜೈನನ ಮನೆಯಲ್ಲಿ ಭಿಕ್ಷೆ ಸ್ವೀಕರಿಸಿದರೆ ?

ಕ್ಷಪಣಕ—ಅಷ್ಟೇ ಅಲ್ಲ, ತನ್ನ ಮಾಯೆಯಿಂದ ರಾಜಕುಮಾರಿಯನ್ನು ಗುಣಪಡಿಸಿ ಯೋಗ ಸಾಮರ್ಥ್ಯದಿಂದ ರಾಜನಿಗೆ ವೈಷ್ಣವ ದೀಕ್ಷೆ ಕೊಡಲು ಒಪ್ಪಿದನಂತೆ.

ಗುರು—(ಕೋಪೋದ್ದೀಪಿತರಾಗಿ) ಇವನು ನಮ್ಮ ಮತವನ್ನು ನಾಶಮಾಡಲು ಈ ಉಪಾಯ ಮಾಡಿದವಾ ! ಇರಲಿ, ಮಾಡುತ್ತೇನೆ. ಈಗಲೇ ನಡೆಯಿರಿ. ನಾವು ಹನ್ನೆರಡು ಸಾವಿರ (೧೨,೦೦೦) ಜೈನರೂ ಹೋಗಿ ಅವನಿಗೆ ಏಕಕಾಲದಲ್ಲಿ ಅನೇಕ ಪ್ರಶ್ನೆಗಳನ್ನು ಹಾಕಿ ಅವನನ್ನು ಅವಮಾನಗೊಳಿಸಿ ಓಡಿಸುವಾ, ಹೊರಡಿ. (ಎಲ್ಲರೂ ಒಟ್ಟಿಗೆ ಹೊರಡುವರು.)

(ತೆರೆ ಬೀಳುವುದು)

## ದೃಶ್ಯ—೧೦

[ನರಸಿಂಹ ಸ್ವಾಮಿಯ ದೇವಸ್ಥಾನ. ರಾಮಾನುಜರೂ, ಅವರ ಶಿಷ್ಯರೂ ಮಾತಾಡುತ್ತಾ ಕುಳಿತಿರುವರು ]

ರಾಮಾನುಜ—ನಂಬಿಗಳೇ, ರಾಜರು ಕುಶಲದಿಂದಿರುವರೇ ? ಅವರ ಕುವರಿ ಚಂಪಕ ಚೆನ್ನಾಗಿರುವಳೇ ?

ನಂಬಿ—ತಮ್ಮ ಕೃಪೆಯಿಂದ ಎಲ್ಲರೂ ಚೆನ್ನಾಗಿರುವರು ಪೂಜ್ಯರೇ ಜೈನ ಗುರುಗಳು ತಮ್ಮ ಮೇಲೆ ಕೋಪಿಸಿಕೊಂಡಿರುವರು.

ರಾಮಾನುಜ—ಏಕೆ ?

ನಂಬಿ—ತಮ್ಮಿಂದ ಅವರಿಗೆ ರಾಜ ಸಹಾಯ ತಪ್ಪಿ, ಅವರ ಮತ ಕುಂದುವುದೆಂದು ಭಯವುಂಟಾಗಿದೆ. (ಒಬ್ಬ ಭಾಗವತರು ಬಂದು)

ಭಾಗವತ—(ನಮಸ್ಕರಿಸಿ) ಗುರುಗಳೇ, ಜೈನರ ಕೂಟವೇ ಇಲ್ಲಿಗೆ ಧಾವಿಸಿ ಬರುತ್ತಿರುವುದು.

ರಾಮಾನುಜ—ಹಾಗೇನು ? (ಜೈನರ ತಂಡವು ಬರುವುದು )

ಜೈನ ಗುರು—ಹೇ, ರಾಮಾನುಜ .. .. ಎಲ್ಲಿರುವೆ ? ಬೇಗ ಬಾ.

ರಾಮಾನುಜ—ಏಕೆ ? ನಾನಿಲ್ಲೇ ಇರುವೆ.

ಜೈನ ಗುರು—ಏನಯ್ಯ ? ರಾಜನಿಗೆ ಏನು ಮಾಡಿದೆ ? ಏನು ಯೋಗಮಾಯೆ ಮಾಡಿ ಬುಟ್ಟಿಯಲ್ಲಿ ಹಾಕಿದೆ ?

ರಾಮಾನುಜ—ನಾನೇನು ಮಾಡಿದೆ ? ಅವರ ಮಗಳ ವ್ಯಾಧಿ ನಿವಾರಿಸಿದೆ, ಅಷ್ಟೆ.

ಜೈನ ಗುರು—ಏನು ಅಷ್ಟೆ. ಅದೆಲ್ಲಾ ನಮ್ಮ ಬಳಿ ನಡೆಯದು ಈಗ ನೀನು ನಮ್ಮ ಪ್ರಶ್ನೆಗಳಿಗೆ ವಿದ್ವತ್ ಪೂರ್ಣವಾದ ಉತ್ತರ ಕೊಡಬೇಕು.

ರಾಮಾನುಜ—ಆಗಲಿ. ತಾವು ಪ್ರಶ್ನೆಯನ್ನು ಕೇಳಿ.

ಜೈನ ಗುರು—ನಾನೊಬ್ಬನೇ ಅಲ್ಲ ಇಲ್ಲಿ ನೋಡು, ನನ್ನ ಜೊತೆ ಬಂದಿರುವ ಈ ೧೨,೦೦೦ ಜೈನರಿಗೂ ಉತ್ತರವನ್ನು ಹೇಳಬೇಕು.

ರಾಮಾನುಜ—(ಮೌನವಾಗಿ ಕುಳಿತಿರುವರು.)

ಜೈನ ಗುರು—ಇಲ್ಲದಿದ್ದರೆ ಸೋತೆನೆಂದು ಹೇಳು ಈ ಊರು ಬಿಟ್ಟು ಈಗಲೇ ಹೋಗಬೇಕು. (ರಾಜನು ಪ್ರವೇಶಿಸುವನು)

ರಾಜ—ನಿಮ್ಮಲ್ಲಿ ವಾಗ್ವಾದ ನಡೆಯುತ್ತಿದೆಯೆಂದು ತಿಳಿದು ಧಾವಿಸಿ ಬಂದೆ. ಗುರುಗಳೇ ಈ ವಿಚಾರವನ್ನು ಬಿಟ್ಟುಬಿಡಿ. ಏಕೆ ಈ ಆಕ್ರೋಶ ?

ಜೈನ ಗುರು—ಆಗದು. ಏನು ನೀನು ಹೇಳುವುದು ? ಅವನ ಯೋಗ ಮಾಯೆಗೆ ಮರುಳಾದೆಯಾ ಬಿಟ್ಟೆದೇವಾ ?

ರಾಜ—ಹಾಗಲ್ಲ ಗುರುಗಳೇ ಇನೆಲ್ಲಾ ಯಾಕೆ ?

ಜೈನ ಗುರು—ಅವನು ಉತ್ತರ ಹೇಳಲೇಬೇಕು. ವಾದವಾಗಲೇ ಬೇಕು.

ರಾಜ—ನೀವು ಸೋತರೆ ?

ಜೈನ ಗುರು—ನಾವು ಸೋತರೆ ಈ ೧೨,೦೦೦ ಜನರನ್ನು ಕಲ್ಲುಗಾಣಕ್ಕೆ ಹಾಕು.

ದಾಶರಥಿ—ಏಕೆ ಗುರುಗಳೇ ಸುಮ್ಮನೆ ಕುಳಿತಿರುವಿರಿ ?

ರಾಮಾನುಜ—ಇಷ್ಟು ಜನಕ್ಕೂ ಜವಾಬು ಹೇಳಲು ಎಷ್ಟು ವರ್ಷಗಳಾಗಬಹುದೆಂದು ಯೋಚಿಸುತ್ತಿದ್ದೆ.

ದಾಶರಥಿ—(ಮೆತ್ತಗೆ) ಏಕೆ ಯೋಚಿಸುವಿರಿ ? ತಾವು ಶೇಷಾವತಾರಿಗಳೆಂಬುದು ಮರೆತು ಹೋಯಿತೇ ? ತಮಗೆ ಇದು ಒಂದು ದೊಡ್ಡ ಕೆಲಸವೇ ?

ರಾಮಾನುಜ—ಜೈನ ಗುರುಗಳೇ, ಆಗಬಹುದು. ತಾವೆಲ್ಲಾ ನರಸಿಂಹ ಸ್ವಾಮಿಯ ದೇವಸ್ಥಾನದ ದೊಡ್ಡ ಮಂಟಪದಲ್ಲಿ ಕೂಡಿರಿ. ನಾನು ತಮಗೆ ಉತ್ತರ ಹೇಳುತ್ತೇನೆ. (ಎಲ್ಲರೂ ಬಂದು ಮಂಟಪದಲ್ಲಿ ಕೂಡುವರು.) ರಾಮಾನುಜರು ಪಕ್ಕದಲ್ಲಿದ್ದ ಒಂದು ಸಣ್ಣ ಕೊಠಡಿಗೆ ಪ್ರವೇಶಿಸಿ, ಬಾಗಿಲಿಗೆ ತೆರೆಯನ್ನು ಹಾಕಿಸುವರು, ಶೇಷಾವತಾರವನ್ನು ತಾಳಿ)

ರಾಮಾನುಜ—ಈಗ ನೀವುಗಳೆಲ್ಲಾ ಏಕಕಾಲದಲ್ಲಿ ನಿಮ್ಮ ನಿಮ್ಮ ಪ್ರಶ್ನೆಗಳನ್ನು ಕೇಳಿ,

(ಇಲ್ಲಿ ಹಲವಾರು ಪ್ರಶ್ನೆಗಳನ್ನು ಹಾಕಬೇಕು. ಎಲ್ಲರೂ ಉತ್ತರವನ್ನು ಕೇಳಿದಂತೆ ನಟಿಸಬೇಕು. ಉತ್ತರಗಳನ್ನು ಕೇಳಿ ಎಲ್ಲರಿಗೂ ಸಮಾಧಾನವಾದಂತೆ ತೋರಿಸಬೇಕು.)

ಜೈನ ಗುರು—ನಾವು ಸೋತೆವು. ಬಿಟ್ಟಿದೇವ ಈಗ ನೀನು ನಿನ್ನ ಪ್ರತಿಜ್ಞೆಯನ್ನು ನೆರವೇರಿಸು. ನಾವೆಲ್ಲಾ ಸಿದ್ಧರಾಗಿದ್ದೇವೆ,

ರಾಮಾನುಜ—ಬಿಟ್ಟಿದೇವ, ಜೈನ ಗುರುಗಳು ಅಹಂ ನೀಗಿದರು. ಈಗ ಅವರಿಗೆ ಜ್ಞಾನೋದಯವಾಗುತ್ತಿರುವುದು.

ಬಿಟ್ಟಿದೇವ—ಹಾಗಾದರೆ ಗುರುಗಳೇ,

ರಾಮಾನುಜ—ಅವರಿಗೆ ಯಾವ ಶಿಕ್ಷೆಯನ್ನೂ ವಿಧಿಸಬೇಕಾಗಿಲ್ಲ. ಅವರನ್ನು ಮನ್ನಿಸಿ ಬಿಡು.

ಕೆಲವು ಕ್ಷಪಣಕರು—ಪೂಜ್ಯ ರಾಮಾನುಜರೇ ನಾವು ತಮ್ಮ ವೈಷ್ಣವ ದೀಕ್ಷೆಯನ್ನು ಪಡೆಯಲು ಇಚ್ಛಿಸುತ್ತೇವೆ.

ರಾಮಾನುಜ—ಪಂಚ ಸಂಸ್ಕಾರಗಳ ರೀತ್ಯಾ ನಿಮಗೆ ವೈಷ್ಣವ ದೀಕ್ಷೆಯನ್ನು ಕೊಡುವೆನು.

ಕ್ಷಪಣಕರು—ನಾವಿನ್ನು ವೈಷ್ಣವರಾದೆವು,

ಬಿಟ್ಟಿದೇವ—ಪೂಜ್ಯರೇ, ಅಪ್ಪಣೆ ಕೊಡಿ ನಾವಿನ್ನು ಬರುವೆವು.

ರಾಮಾನುಜ—ಆಗಲಿ. (ಎಲ್ಲರೂ ತೆರಳುವರು.)

(ತೆರೆ ಬೀಳುವುದು)

# ದೃಶ್ಯ—೧೧

[ತೊಂಡನೂರಿನ ಒಂದು ಬೀದಿ. ಇಬ್ಬರು ರೈತರು ಮಾತನಾಡುತ್ತಾ ಬರುವರು]

ಬೋರೇಗೌಡ—ತಿಮ್ಮೇಗೌಡ್ರೇ ಕೇಳಿದಿರಾ! ರಾಮಾನುಜರ ಅದ್ಭುತ ಶಕ್ತಿಯ?

ತಿಮ್ಮೇಗೌಡ—ಏನ್ ಬೋರೇಗೌಡ್ರೇ? ಏನ್ ಸಮಾಚಾರ?

ಬೋರೇಗೌಡ—ರಾಜನ ಮಗಳಿಗಾವರಿಸಿದ ಪಿಶಾಚಿಯನ್ನು ತಮ್ಮ ಅದ್ಭುತ ಶಕ್ತಿಯಿಂದ ಬಿಡಿಸಿದರಂತೆ. ಅಷ್ಟೇ ಅಲ್ಲಾ,

ತಿಮ್ಮೇಗೌಡ—ಮತ್ತೇನು?

ಬೋರೇಗೌಡ—ಎಲ್ಲಕ್ಕಿಂತಲೂ ಅದ್ಭುತ ಎಂದರೆ ೧೨,೦೦೦ ಜೈನರಿಗೆ ಏಕಕಾಲದಲ್ಲಿ ಉತ್ತರ ನೀಡಿದ್ದು. ಆದಿಶೇಷನ ಅವತಾರ ತಾಳಿ, ತಮ್ಮ ಸಹಸ್ರ ನಾಲಿಗೆಯಿಂದ ಏಕಕಾಲದಲ್ಲಿ ಉತ್ತರ ನೀಡಿ ಅಷ್ಟು ಜನರನ್ನೂ ವಾಕ್‌ಚಾತುರ್ಯದಿಂದ ಸೋಲಿಸಿದರಂತೆ,

ತಿಮ್ಮೇಗೌಡ—ರಾಜನೂ ವೈಷ್ಣವನಾದನಂತೆ ಅವನಿಗೆ ವಿಷ್ಣುವರ್ಧನನೆಂದು ಹೆಸರಿಟ್ಟರಂತೆ.

ಬೋರೇಗೌಡ—ಅಷ್ಟೇ ಅಲ್ಲ. ವೈಷ್ಣವ ಮತ ಪ್ರಚಾರಕ್ಕೆ ಬದ್ಧಕಂಕಣನಾಗಿದ್ದಾನೆ. ಬೇಲೂರಿನ ಚೆನ್ನಿಗರಾಯನ ದೇವಸ್ಥಾನ, ತಲಕಾಡಿನ ಕೀರ್ತಿ ನಾರಾಯಣ, ಗದುಗಿನ ವೀರನಾರಾಯಣ, ಹರಪನ ಹಳ್ಳಿಯಲ್ಲಿ ಲಕ್ಷ್ಮೀನಾರಾಯಣನ ದೇವಾಲಯ ಮೊದಲಾದುವನ್ನು ಕಟ್ಟಿಸಿ, ರಾಮಾನುಜರಿಗೆ ಬೆಂಬಲವಾಗಿ ನಿಂತಿದ್ದಾನೆ

ತಿಮ್ಮೇಗೌಡ—ನಮ್ಮ ನೀರಿನ ದಾಹವೂ, ಕ್ಷಾಮವೂ ನೀಗಿದುದು ಅವರ ಕೃಪೆಯಿಂದಲೇ ಅಲ್ಲವೇ?

ಬೋರೇಗೌಡ—ಅವರು ಕಾಡಿನಲ್ಲಿ ಧುಮುಕುತ್ತಿರುವ ಸಣ್ಣ ಜಲಪಾತವನ್ನು ನೋಡಿದರಂತೆ

ತಿಮ್ಮೇಗೌಡ—ಅದನ್ನು ಹೇಗೆ ಇಲ್ಲಿಯವರೆಗೆ ತಂದರು?

ಬೋರೇಗೌಡ—ರಾಜರಿಗೆ ಅದನ್ನು ತಿಳಿಸಿ, ಕಾಡನ್ನು ಕಡಿಸಿ, ಅದನ್ನು ಇಲ್ಲಿಯವರೆಗೂ ತರಿಸಿದರು.

ತಿಮ್ಮೇಗೌಡ—ಇಲ್ಲಿ ಏಕೆ ಅಣೆಕಟ್ಟನ್ನು ಕಟ್ಟಿಸಿದರು?

ಬೋರೇಗೌಡ—ಇಲ್ಲಿ ವಿಶಾಲವಾದ ಅಣೆಕಟ್ಟನ್ನು ಕಟ್ಟಿಸಿ, ಅದರಿಂದ ಕಾಲುವೆಗಳನ್ನು ತೋಡಿಸಿ ನಮ್ಮಂತ ರೈತರಿಗೆ ನೀರಾವರಿಯನ್ನು ಒದಗಿಸಿದರು

ತಿಮ್ಮೇಗೌಡ —ಹಾಗಾದರೆ ರಾಮಾನುಜರು ಒಬ್ಬ ಜ್ಞಾನಿಗಳೇ ಅಲ್ಲ, ಅವರು ರಾಜಕಾರಣಿಗಳೂ ಆಗಿದ್ದಾರಂತೆ ವಿಜ್ಞಾನಿಗಳೂ ಅಹುದು.

ಬೋರೇಗೌಡ—ಬರೇ ರಾಜಕಾರಣಿಗಳೇ ಅಲ್ಲ, ರಾಜಕಾರಣಿಗಳ ಗುರುಗಳು ಅನ್ನಿ. ವಿದೇಶೀಯರು ಈಗಲೂ ಬಂದು ಈ ಅದ್ಭುತವಾದ ಅಣೆಕಟ್ಟನ್ನು ನೋಡುತ್ತಿದ್ದಾರೆ.

ತಿಮ್ಮೇಗೌಡ—ರಾಮಾನುಜರು ರೈತಪ್ರಿಯರೂ, ಹಿತಚಿಂತಕರು ಅಲ್ಲವೇ ?

ಬೋರೇಗೌಡ—ಹೌದೌದು ಅದರಲ್ಲೇನು ಸಂದೇಹ ?

ತಿಮ್ಮೇಗೌಡ—ಈಗ ರಾಮಾನುಜರೆಲ್ಲಿ ? ಕಾಣುವುದಿಲ್ಲವಲ್ಲಾ ?

ಬೋರೇಗೌಡ—ಇವರ ಕನಸಿನಲ್ಲಿ ಶ್ರೀ ತಿರುನಾರಾಯಣ ಕಾಣಿಸಿಕೊಂಡು—ರಂಗನಾಥನ ಭಕ್ತನಾದ ರಾಮಾನುಜಾ, ನಾನು ಇಲ್ಲಿ ನಿನಗಾಗಿ ಕಾದು, ತುಳಸೀ ವನದಲ್ಲಿ ಭೂಗರ್ಭದಲ್ಲಿ ಅಡಗಿದ್ದೇನೆ. ಬಂದು ನನ್ನನ್ನು ಜೀರ್ಣೋದ್ಧಾರ ಮಾಡು, ಎಂದರಂತೆ.

ತಿಮ್ಮೇಗೌಡ—ಹಾಗಾದರೆ ತಿರುನಾರಾಯಣಪುರಕ್ಕೆ ತೆರಳುವರೇ ?

ಬೋರೇಗೌಡ—ಅಂತೂ ತೊಂಡನೂರು, ತೊಣ್ಣೂರುಗಳಲ್ಲಿ ಸ್ಥಿರವಾದ ಜ್ಞಾನ ದೀವಿಗೆಯನ್ನು, ಜ್ಞಾನ ಜಲವನ್ನು ಹರಿಸಿ ಹೋದರಲ್ಲಾ !

ತಿಮ್ಮೇಗೌಡ—ನಿಜವಾಗಿಯೂ ರಾಮಾನುಜರು ದೊಡ್ಡವರು, ಮಹಾತ್ಮರು ಬನ್ನಿ ನಾವು ಹೋಗಿ ರಾಮಾನುಜರನ್ನು ದರ್ಶಿಸುವಾ

(ತೆರೆ ಬೀಳುವುದು)

# ಅಂಕ—೩

## ದೃಶ್ಯ—೧

[ನರಸಿಂಹಸ್ವಾಮಿಯ ಮರ. ರಾಮಾನುಜರು ಸ್ನಾನಮಾಡಿ, ತಿರುಮಣ್ ಕಾಪ್ಪು (ಪವಿತ್ರ ನಾಮ ಧರಿಸುತ್ತಾ) ಕೊಳ್ಳುತ್ತಾ ಇರುವರು. ದಾಶರಥಿ ಅವರ ಬಳಿ ನಿಂತಿರುವರು [

ರಾಮಾನುಜ—ದಾಶರಥಿಗಳೇ, ತಿರುಮಣ್‌ಕಾಪ್ (ನಾಮ) ಮುಗಿಯುತ್ತಾ ಬಂದಿತಲ್ಲಾ! ಈಗೇನು ಮಾಡುವುದು ?

ದಾಶರಥಿ—ತಾವು ನಿನ್ನೆ ಏನೋ ಸ್ವಪ್ನವಾಯಿತು ಎಂದು ಹೇಳಿದಿರಲ್ಲಾ

ರಾಮಾನುಜ—ಇಲ್ಲಿಯೇ ಸಮೀಪದಲ್ಲಿ ಯಾದವಗಿರಿ ಬೆಟ್ಟವಿದೆ ಅಲ್ಲಿ ತಿರುಮಣ್ ಇದೆ ಎಂದು ತಿರುನಾರಾಯಣರು ಹೇಳಿದರು.

ದಾಶರಥಿ—ಹಾಗಾದರೆ ನಾವು ಅಲ್ಲಿಗೆ ಪ್ರಯಾಣ ಬೆಳೆಸೋಣ

ರಾಮಾನುಜ—ಹೇಗೆ ಸಾಧ್ಯ ? ಅದೆಲ್ಲಾ ಬರೀ ಅರಣ್ಯ, ಪ್ರವೇಶಿಸಲೂ ಸಾಧ್ಯವಿಲ್ಲ.

ದಾಶರಥಿ—ಈ ವಿಷಯವನ್ನು ವಿಷ್ಣುವರ್ಧನರಿಗೆ ಏಕೆ ತಿಳಿಸಬಾರದು ?

ರಾಮಾನುಜ—ಹಾಗಾದರೆ ಅವರನ್ನು ಕರೆತರುವೆಯಾ ?

ದಾಶರಥಿ—ಆಗಲಿ ಗುರುಗಳೇ. (ಹೋಗಿ, ವಿಷ್ಣುವರ್ಧನನ ಜೊತೆ ಬರುವರು )

ಮಹಾರಾಜ—ಪೂಜ್ಯರೇ, ಏನಪ್ಪಣೆ ?

ರಾಮಾನುಜ—ನನಗೆ ನಿನ್ನೆ ತಿರುನಾರಾಯಣರು ಕನಸಿನಲ್ಲಿ ಬಂದು, ಯಾದವಗಿರಿ ಬೆಟ್ಟದಲ್ಲಿ, ಭೂಗರ್ಭದಲ್ಲಿ ತಿರುಮಣ್ ಇರುವುದಾಗಿ ತಿಳಿಸಿದರು.

ಮಹಾರಾಜ—ಸರಿ. ಅಲ್ಲಿಂದ ತರಿಸುತ್ತೇನೆ.

ರಾಮಾನುಜ—ಹಾಗೆ ಆಗುವುದಿಲ್ಲ. ನಾವೇ ಬರುತ್ತೇವೆ. ಅಂಥ ಪವಿತ್ರವಾದ ತಿರುಮಣ್ಣನ್ನು ನಾವೇ ತರಬೇಕು.

ಮಹಾರಾಜ—ನಾವೆಲ್ಲಾ ಹೋಗೋಣ.

ರಾಮಾನುಜ—ಅಷ್ಟು ಸುಲಭವಲ್ಲ ಮಹಾರಾಜರೇ. ಅದು ಒಂದು ಗೊಂಡಾರಣ್ಯ. ಪ್ರವೇಶಿಸಲೂ ಸಾಧ್ಯವಿಲ್ಲ.

ಮಹಾರಾಜ—ಕಾಡನ್ನು ಕಡಿಸಿದರಾಯಿತು ನಾನು ನಮ್ಮ ಸೈನಿಕರನ್ನು ಕಳುಹಿಸಿ, ಕಾಡನ್ನು ಕಡಿಸಿ, ದಾರಿ ಮಾಡಿಸುತ್ತೇನೆ. ಆಮೇಲೆ ನಾವೆಲ್ಲಾ ಹೋಗಬಹುದಲ್ಲಾ ?

ರಾಮಾನುಜ—ಹಾಗೇ ಆಗಲಿ. ಬೇಗ ಕೆಲಸವಾಗಲಿ.

ಮಹಾರಾಜ—ಇದೋ, ಈಗಲೇ ಕಳುಹಿಸುವೆ. (ವಂದಿಸಿ) ನಾನು ಬರುತ್ತೇನೆ.

ರಾಮಾನುಜ—ಆಗಲಿ, ಶುಭಮಸ್ತು.

(ತೆರೆ ಬೀಳುವುದು)

## ದೃಶ್ಯ—೨

[ರಾಮಾನುಜ ಮೊದಲಾದ ಶಿಷ್ಯರು ಕುಳಿತಿರುವರು. ರಾಮಾನುಜರು ಶ್ರೀಭಾಷ್ಯದ ಒಂದು ಶ್ಲೋಕಕ್ಕೆ ಅರ್ಥವನ್ನು ಹೇಳುತ್ತಿರುವರು. ವಿಷ್ಣುವರ್ಧನ ಬಂದು]

ವಿಷ್ಣುವರ್ಧನ—(ನಮಸ್ಕರಿಸಿ) ಪೂಜ್ಯರೇ, ದಾರಿಯು ಸಿದ್ಧವಾಗಿರುವುದು. ನಾವು ಇನ್ನು ಪ್ರಯಾಣವನ್ನು ಬೆಳೆಸೋಣವೇ ?

ರಾಮಾನುಜ—ಹಾಗಾದರೆ ನಾಳೆಯ ನಕ್ಷತ್ರವು ಪ್ರಯಾಣಕ್ಕೆ ಅನುಕೂಲವಾಗಿರುವುದು. ನಾಳೆಯೇ ಪ್ರಯಾಣ ಬೆಳೆಸೋಣ.

(ರಾಮಾನುಜರೂ, ಅವರ ಶಿಷ್ಯರೂ, ವಿಷ್ಣುವರ್ಧನನೂ, ಕೆಲವು ಸೈನಿಕರೂ ಹೋಗುತ್ತಿರುವರು )

ರಾಮಾನುಜ—ಆಹಾ ! ಯಾದವಾದ್ರಿಯು ಎಷ್ಟು ರಮ್ಯವಾಗಿರುವುದು !

ದಾಶರಥಿ—ಇಲ್ಲಿನ ಶೈಲಮಾಲೆಗಳು ನೋಡಲು ಅದ್ಭುತವಾಗಿ ಕಾಣುತ್ತಿರುವುವು.

ವಿಷ್ಣುವರ್ಧನ—ನಿಜವಾಗಿಯೂ ಭಗವಂತನು ನಮ್ಮನ್ನು ಎಷ್ಟು ಪವಿತ್ರವಾದ ಸ್ಥಳಕ್ಕೆ ಕರೆತಂದಿರುವನು !

ರಾಮಾನುಜ—(ನಿಂತು) ಈ ಸರಸ್ಸನ್ನು ನೋಡಿ, ಎಷ್ಟು ತಿಳಿಯಾದ ನೀರಿರುವುದು !

ದಾಶರಥಿ—ನೀರು ಶುಭ್ರವಾಗಿ ಪನ್ನೀರಿನ ಹಾಗೆ ಹರಿಯುತ್ತಿರುವುದು.

ರಾಮಾನುಜ—ದಾಶರಥಿ, ಈದಿನ ಬಹುಧಾನ್ಯ ಸಂವತ್ಸರದ ತೈಮಾಸದ ಪುನರ್ವಸು ನಕ್ಷತ್ರವಲ್ಲವೇ ?

ದಾಶರಥಿ—ಹೌದು ಗುರುಗಳೇ, ಈದಿನ ಮಕರಮಾಸ ಪುನರ್ವಸು ನಕ್ಷತ್ರ. ಗುರುಗಳೇ ಈ ಪುಷ್ಕರಣಿಯ ಹೆಸರೇನು ?

ರಾಮಾನುಜ—ಇದನ್ನು ವೇದ ಪುಷ್ಕರಿಣಿ ಎನ್ನುವರು ಅಗೋ, ಅಲ್ಲಿ ಕಾಣುವುದು ಪರಿಧಾನ ಶಿಲೆಯಲ್ಲವೇ ?

ದಾಶರಥಿ—ಇಲ್ಲೇ ಭಗವದವತಾರವಾದ ದತ್ತಾತ್ರೇಯರು ಸನ್ಯಾಸಾಶ್ರಮ ಸ್ವೀಕರಿಸಿದ ಸ್ಥಳವೆಂದು ಕೇಳಿದ್ದೆ

ರಾಮಾನುಜ—ಬನ್ನಿ, ಪುಷ್ಕರಿಣಿಯಲ್ಲಿ ಸ್ನಾನ ಮಾಡೋಣ. (ಎಲ್ಲರೂ ಸ್ನಾನ ಮಾಡುವರು ರಾಮಾನುಜರು ತಮ್ಮ ಕಾಷಾಯವನ್ನು ಆ ಶಿಲೆಯ

ಮೇಲೆ ಇಟ್ಟು, ಶಾಸ್ತ್ರ ರೀತಿಯಿಂದ ಧರಿಸುವರು ಎಲ್ಲರೂ ಅವರವರ ಬಟ್ಟೆಗಳನ್ನುಟ್ಟು ಹೊರಡುವರು.]

ರಾಮಾನುಜ—ಎಷ್ಟು ಹುಡುಕಿದರೂ ತಿರುಮಣ್ ಪಳ್ಳ ಸಿಗಲಿಲ್ಲವಲ್ಲಾ ?

ದಾಶರಥಿ—ನಾನೂ ಹುಡುಕಿದೆ, ನನಗೂ ಕಾಣಲಿಲ್ಲವಲ್ಲಾ ?

ವಿಷ್ಣುವರ್ಧನ—ನಾನೂ ನನ್ನ ಭಟರನ್ನು ಕಳುಹಿಸಿ ಹುಡುಕಿಸಿದೆ ಅವರು ಎಲ್ಲೂ ಇಲ್ಲ ಎಂದು ಬಂದರು.

ರಾಮಾನುಜ—ಶ್ವೇತದ್ವೀಪ ಗರುಡನಿಂದ ತಂದು ನಿಕ್ಷೇಪಿಸಿರುವುದು ಎಂದು ಭಗವಂತ ಹೇಳಿದನಲ್ಲಾ ? ಮತ್ತೆಲ್ಲಿ ಹುಡುಕುವುದು ?

ದಾಶರಥಿ—ಗುರುಗಳೇ, ಸಾಯಂಕಾಲವಾಯಿತು. ಸಾಯಂ ಸಂಧ್ಯಾವಂದನೆ ಮಾಡಲು ಪುಷ್ಕರಣಿಗೆ ತೆರಳೋಣ. ಬನ್ನಿ ಎಲ್ಲರೂ ಹೋಗೋಣ, ಎಂದು ಎಲ್ಲರೂ ತೆರಳುವರು ಇಷ್ಟರಲ್ಲಿ ಕತ್ತಲೆಯಾಗುವುದು. ರಾಮಾನುಜರು, ದಾಶರಥಿ ಬರುವರು.

ರಾಮಾನುಜ—ಇನ್ನು ಎಲ್ಲಿ ಹುಡುಕುವುದು ದಾಶರಥಿಗಳೇ

ದಾಶರಥಿ—ಗುರುಗಳೇ ಈಗ ಕತ್ತಲಾಯಿತು, ವಿಶ್ರಮಿಸಿಕೊಳ್ಳಿ. ನಾಳೆ ಎಲ್ಲರೂ ಸೇರಿ ಹುಡುಕೋಣ.

ರಾಮಾನುಜ—ಆಗಲಿ (ಇಬ್ಬರೂ ತೆರಳುವರು )

(ತೆರೆ ಬೀಳುವುದು)

## ದೃಶ್ಯ—೩

[ವೇದ ಪುಷ್ಕರಣಿಯ ಒಂದು ಮಂಟಪ. ರಾತ್ರಿ ಕತ್ತಲೆ. ಎಲ್ಲರೂ ಮಲಗಿರುವರು. ರಾಮಾನುಜರು ಸ್ವಲ್ಪ ಎತ್ತರವಾದ ಸ್ಥಳದಲ್ಲಿ ಮಲಗಿರುವರು. ಆಗಾಗ್ಗೆ ಮಗ್ಗುಲನ್ನು ಬದಲಾಯಿಸುತ್ತಿರುವರು ]

ರಾಮಾನುಜ—ರಂಗನಾಥ, ತಿರುಮಣ್ ಸಿಗಲಿಲ್ಲವಲ್ಲಾ ? ಏನು ಮಾಡಲಿ ? (ಕನವರಿಸುವರು) ಒಂದು ದಿವ್ಯ ಜ್ಯೋತಿಯು ಕಾಣಿಸುವುದು ಕೈ ಮುಗಿಯುವರು

ಜ್ಯೋತಿ—ರಾಮಾನುಜಾ, ರಾಮಾನುಜಾ.

ರಾಮಾನುಜ—ಯಾರು ? (ತಿರುನಾರಾಯಣ ! ಎಂದು ಕೈ ಮುಗಿಯುವರು)

ತಿರುನಾರಾಯಣ—ನಾನು ಇಲ್ಲಿ ಬಹಳ ವರ್ಷಗಳಿಂದ ಭೂಗತನಾಗಿದ್ದೇನೆ, ನಿನ್ನ ಬರವಿಗಾಗಿ ಕಾಯುತ್ತಿದ್ದೇನೆ.

ರಾಮಾನುಜ—ನಾರಾಯಣ, ಎಲ್ಲಿ ಭೂಗತನಾಗಿದ್ದೀಯೆ ? ನನಗಾಗಿ ಕಾದೆಯಾ ? ಇದೋ ಬಂದೆ.

ನಾರಾಯಣ—ನನ್ನನ್ನು ಇಲ್ಲಿಂದ ತೆಗೆಯಲಾರೆಯಾ ?

ರಾಮಾನುಜ—ಎಲ್ಲಿದ್ದೀಯ ? ಹೇಗೆ ನಿನ್ನನ್ನು ತೆಗೆಯಲಿ ?

ನಾರಾಯಣ—ಕಲ್ಯಾಣಿ ಸರಸ್ಸಿಗೆ ನೈಋತ್ಯದಲ್ಲಿ.

ರಾಮಾನುಜ—ಹೂಂ, ಕಲ್ಯಾಣಿ ಸರಸ್ಸಿಗೆ ನೈಋತ್ಯದಲ್ಲಿ.

ನಾರಾಯಣ—ಸಂಪಿಗೆ ಮರದ ತೋಪಿರುವುದು.

ರಾಮಾನುಜ—ಹೂಂ, ಸಂಪಿಗೆ ಮರದ ತೋಪು

ನಾರಾಯಣ—ಅಲ್ಲಿ ಒಂಟಿಯಾದ ಬಕುಳ ವೃಕ್ಷವಿರುವುದು.

ರಾಮಾನುಜ—ಆಮೇಲೆ ?

ನಾರಾಯಣ—ಅಲ್ಲಿಂದ ದಕ್ಷಿಣಕ್ಕೆ ತಿರುಗಿಕೊಂಡು ಹೋಗು.

ರಾಮಾನುಜ—ತಿರುಗಿಕೊಂಡು ಹೋದರೆ ?

ನಾರಾಯಣ—ಅಲ್ಲೊಂದು ತುಳಸೀವನ ಕಾಣುವುದು,

ರಾಮಾನುಜ—ತುಳಸೀವನ ಆಮೇಲೆ ?

ನಾರಾಯಣ—ಅಲ್ಲಿ ತುಳಸೀವನದಿಂದ ಮುಚ್ಚಿದ ಒಂದು ವಲ್ಮೀಕ ಕಾಣಿಸುವುದು,

ರಾಮಾನುಜ—ವಲ್ಮೀಕ ಕಾಣುವುದೇ ?

ನಾರಾಯಣ—ಅದರಲ್ಲಿ ನಾನಿರುವೆ. ಎಲ್ಲಾದರೂ ದಾರಿ ತಪ್ಪೀಯೆ. ಭಕುಳ ವೃಕ್ಷದಿಂದ ಹುತ್ತದವರೆಗೆ ತುಳಸೀ ಗಿಡಗಳಿವೆ. ಸಣ್ಣ ಕವಲುಗಳು ಮುರಿದು ಹಾಕಿರುವುವು. ಅದನ್ನೇ ನೋಡಿಕೊಂಡು ಬಾ ನಾನು ಸಿಗುತ್ತೇನೆ.

ರಾಮಾನುಜ—ಮತ್ತೆ ತಿರುಮಣ್ ಪಳ್ಳೆ ?

ನಾರಾಯಣ—ಮೊದಲು ನನ್ನನ್ನು ಹುತ್ತದಿಂದ ಉದ್ಧರಿಸು. ಅನಂತರ ಹೇಳುತ್ತೇನೆ.

ರಾಮಾನುಜ—ಸ್ವಾಮಿ ತಿಳಿಸಿ

ನಾರಾಯಣ—ಕಲ್ಯಾಣಿ ಸರಸ್ಸಿಗೆ ವಾಯುವ್ಯ ದಿಕ್ಕಿನಲ್ಲಿ ಸ್ವಲ್ಪ ದೂರ ಹೋದರೆ ಗರುಡನಿಂದ ತರಲ್ಪಟ್ಟು ನಿಕ್ಷೇಪಿಸಿರುವ ತಿರುಮಣ್ ಸಿಕ್ಕುವುದು.

ರಾಮಾನುಜ—ನಾನು ಧನ್ಯ ! (ಹರ್ಷದಿಂದ ಎದ್ದು ಕುಳಿತುಕೊಳ್ಳುವರು) ಈಗ ತಿಳಿಯಿತು ನೀನಿರುವ ಸ್ಥಳ ನಾಳೆಯೇ ತಮ್ಮ ದರ್ಶನ ಮಾಡುವೆನು.

(ತೆರೆ ಬೀಳುವುದು)

# ದೃಶ್ಯ—೪

[ರಾಮಾನುಜರೂ ಅವರ ಶಿಷ್ಯರು, ರಾಜನೂ, ರಾಜಭಟರೂ ದಾರಿಯಲ್ಲಿ ಹೋಗುತ್ತಿರುವರು ರಾಮಾನುಜರು ಮುಂದೆ ಮುಂದೆ ಅವರ ಹಿಂದೆ ಎಲ್ಲರೂ ಹೋಗುವರು ]

ರಾಮಾನುಜ—ಬನ್ನಿ, ಇಲ್ಲೇ ಭಗವಂತನು ಹೇಳಿದ ಸ್ಥಳ ಇದೇ ಸಂಪಿಗೆ ಮರದ ತೋಪು

ದಾಶರಥಿ—ಗುರುಗಳೇ ಅಲ್ಲಿ ಬಕುಳ ವೃಕ್ಷ ಕಾಣುತ್ತಿರುವುದು

ರಾಮಾನುಜ—ಹೌದು, ಇಲ್ಲಿಂದ ದಕ್ಷಿಣಕ್ಕೆ ತಿರುಗಬೇಕು.

ವಿಷ್ಣುವರ್ಧನ—ಪೂಜ್ಯರೇ, ತುಳಸೀವನ ಬಂದುಬಿಟ್ಟಿತು

ರಾಮಾನುಜ—ಅಲ್ಲೇ, ವಲ್ಮೀಕ ಇರುವುದು ತಾಳಿ ಬಂದೆ. (ತುಳಸಿಯನ್ನು ತೆಗೆಯುವರು ಒಂದು ದೊಡ್ಡ ವಲ್ಮೀಕ ಕಾಣುವುದು ಸ್ವಲ್ಪ ವಲ್ಮೀಕದ ಮಣ್ಣು ತೆಗೆಯುವರು. ತಿರುನಾರಾಯಣ ವಿಗ್ರಹದ ಕಿರೀಟ ಕಾಣುವುದು)

ದಾಶರಥಿ ಮತ್ತಿತರರು—ಗುರುಗಳೇ, ಗುರುಗಳೇ ಕಿರೀಟ ಭಗವಂತನ ಕಿರೀಟ. ಸಿಕ್ಕಿದ ನಾರಾಯಣ, ನಾರಾಯಣ ಸಿಕ್ಕಿದ (ಹರ್ಷಾತಿರೇಖದಿಂದ ಕುಣಿದಾಡುವರು )

ರಾಮಾನುಜ—ಪ್ರಭುಗಳೇ, ಈಗ ವಲ್ಮೀಕಕ್ಕೆ ಹಾಲಿನಿಂದ ಅಭಿಷೇಕ ಮಾಡಬೇಕು. ಹಾಲನ್ನು ತರಿಸುವಿರಾ ?

ವಿಷ್ಣುವರ್ಧನ—ಭಟರೇ ಹಾಲನ್ನು ತನ್ನಿರಿ (ಭಟರು ಹೋಗಿ ಎರಡು ಬಿಂದಿಗೆ ಹಾಲು ತರುವರು) ಗುರುಗಳೇ ತೆಗೆದುಕೊಳ್ಳಿ.

ರಾಮಾನುಜ—ನಾನು ಈಗ ಸ್ವಲ್ಪ ಸ್ವಲ್ಪವಾಗಿ ಅಭಿಷೇಕ ಮಾಡುವೆನು. (ಅಭಿಷೇಕ ಮಾಡುವರು ತಿರುನಾರಾಯಣನ ವಿಗ್ರಹ ಹೊಳೆಯುವುದು.)

(ಎಲ್ಲರೂ ಭಕ್ತಿಯಿಂದ ಶ್ಲೋಕ ಹೇಳುವರು )

ರಾಮಾನುಜ—ಅರ್ಚನೆ ಮಾಡಿ, ತಿರುವಾಯ್ ಮೊಳಿಯ ಹತ್ತು ಪಾಶರ ಹೇಳುವರು.

ವಿಷ್ಣುವರ್ಧನ—(ಆಶ್ಚರ್ಯದಿಂದ ನೋಡುತ್ತಾ) ನಾನು ಈ ಭಗವಂತನಿಗೆ ಇಲ್ಲಿ ದೇವಸ್ಥಾನ ಕಟ್ಟಿಸುತ್ತೇನೆ. (ಎಲ್ಲರೂ ಭಗವಂತನನ್ನು ಭಕ್ತಿಯಿಂದ ನೋಡುತ್ತಾ ನಿಲ್ಲುವರು )

(ತೆರೆ ಬೀಳುವುದು)

## ದೃಶ್ಯ—೫

[ಅದೇ ಸ್ಥಳ ಕಲ್ಯಾಣಿ ಸರಸ್ಸಿನ ಬಳಿ ರಾಮಾನುಜರು ಮತ್ತು ದಾಶರಥಿ ಬರುವರು ]

ರಾಮಾನುಜ—ನಾರಾಯಣನು ಈ ಕಲ್ಯಾಣಿಯ ವಾಯುವ್ಯ ದಿಕ್ಕಿನಲ್ಲಿ ತಿರುಮಣ್ ಪಳ್ಳ ಇದೆ ಎಂದಿದ್ದ. ಬಾ ಹೋಗಿ ನೋಡೋಣ,

ದಾಶರಥಿ—ಬಂದೆ ಆಚಾರ್ಯರೆ. (ಇಬ್ಬರೂ ಹೋಗುವರು ಸ್ವಲ್ಪ ದೂರದಲ್ಲಿ ಆಚಾರ್ಯರು ತ್ರಿದಂಡದಿಂದ ಕೆದಕುವರು ಬೆಳ್ಳಗೆ ಹಾಲಿನಂತೆ ಶುದ್ಧವಾದ ತಿರುಮಣ್ ಸಿಕ್ಕುವುದು )

ರಾಮಾನುಜ—ದಾಶರಥಿ ನೋಡಿದೆಯಾ ತಿರುಮಣ್ ಹಾಲಿನಂತೆ ಎಷ್ಟು ಬೆಳ್ಳಗಿದೆ,

ದಾಶರಥಿ—(ನೋಡಿ) ಹೌದು ಗುರುಗಳೇ. ಬಹಳ ಚೆನ್ನಾಗಿದೆ.

ರಾಮಾನುಜ—ಇದು ಗರುಡಾಳ್ವಾರ್ ಶ್ವೇತ ದೀಪದಿಂದ ತಂದ ತಿರುಮಣ್ಣೆಂದು ಸ್ವಾಮಿಗಳು ಹೇಳುವರು

ದಾಶರಥಿ—ಇನ್ನು ವೈಷ್ಣವ ಮತವಿರುವವರೆಗೂ ತಿರುಮಣ್ ಕೊರತೆ ಇಲ್ಲ ಯಥೇಷ್ಟ ವಾಗಿರುವುದು. (ಸುತ್ತಲೂ ನೋಡಿ) ಪೂಜ್ಯರೇ ಇದು ಬರೀ ಅರಣ್ಯ ವಾಗಿರುವುದಲ್ಲ ? ಎಲ್ಲರೂ ಹೇಗೆ ಬಂದು ಹೋಗುವರು ?

ರಾಮಾನುಜ—ವಿಷ್ಣುವರ್ಧನನಿಗೆ ಹೇಳಿ ಅರಣ್ಯವನ್ನು ಸರಿಪಡಿಸಿ, ಊರನ್ನು ನಿರ್ಮಿಸುವ. ದಾಶರಥಿ ಶ್ರೀರಂಗರಾಜ ಭಟ್ಟರ ಬಳಿ ಹೋಗುವ.

ದಾಶರಥಿ—ನಡಿಯಿರಿ ಗುರುಗಳೇ ಹೋಗುವ. (ಇಬ್ಬರೂ ಹೋಗುವರು) ತಾವು ಇಳಿದುಕೊಂಡ ಜಾಗಕ್ಕೆ ಹೋಗಿ, ಶ್ರೀರಂಗರಾಜಭಟ್ಟರೇ, ಶ್ರೀರಂಗರಾಜ ಭಟ್ಟರೇ ಬನ್ನಿ ಗುರುಗಳು ಕರೆಯುತ್ತಿದ್ದಾರೆ.

ಶ್ರೀರಂಗರಾಜಭಟ್ಟ—ಬಂದೆ ಎಂದು ಬರುವರು,

ರಾಮಾನುಜ—ಪಾಂಚರಾತ್ರ ಸಾತ್ವತ ಸಂಹಿತೆಯ ಪ್ರಕಾರ ಶ್ರೀ ತಿರುನಾರಾಯಣನಿಗೆ ಪ್ರೋಕ್ಷಣೆ ಆಗಬೇಕಲ್ಲಾ ?

ರಂಗರಾಜಭಟ್ಟರು—ಆಗಲಿ ಗುರುಗಳೇ ಮಾಡುವೆನು.

ರಾಮಾನುಜ—ಮೂಲ ವಿಗ್ರಹದ ಪ್ರತಿಷ್ಠಾಪನೆ ಏನೋ ಆಯಿತು. ಆದರೆ ನಿತ್ಯೋತ್ಸವ, ಪಕ್ಷೋತ್ಸವ, ಮಾಸೋತ್ಸವಗಳು ನಡೆಯಬೇಕಲ್ಲಾ ? ಉತ್ಸವ ಮೂರ್ತಿಯನ್ನು ಎಲ್ಲಿ ತರುವುದು ? (ಎಂದು ಯೋಚಿಸುತ್ತಾ ಹೋಗುವರು ಒಬ್ಬೊಬ್ಬರಾಗಿ ಅವರ ಹಿಂದೆ ತೆರಳುವರು.)

(ತೆರೆ ಬೀಳುವುದು)

# ಅಂಕ—೭

## ದೃಶ್ಯ—೧

[ರಾಮಾನುಜರ ಕೊಠಡಿ ಸಮಯ–ರಾತ್ರಿ, ರಾಮಾನುಜರು ನಿದ್ರಿಸು ತ್ತಿರುವರು ಹಾಗೆಯೇ ಈ ಕಡೆಯಿಂದ ಆ ಕಡೆ, ಆ ಕಡೆಯಿಂದ ಈ ಕಡೆ ಮಗ್ಗುಲಾಗುವರು "ನಾರಾಯಣನಿಗೆ ಉತ್ಸವಾದಿ ಕೈಂಕರ್ಯಗಳನ್ನು ಹೇಗೆ ಮಾಡಲಿ ? ಉತ್ಸವಮೂರ್ತಿಯೇ ಇಲ್ಲವಲ್ಲಾ", ಎಂದು ಕನವರಿಸುವರು ]

ಧ್ವನಿ—ರಾಮಾನುಜಾ, ರಾಮಾನುಜಾ ! ಏಕೆ ಕೊರಗುವೆ ? ನಾನಿದ್ದೇನೆ.

ರಾಮಾನುಜ—ಯಾರು ? ಯಾರು ! ಯಾರು ನನ್ನನ್ನು ಕರೆಯುತ್ತಿರುವುದು ?

ಧ್ವನಿ—ನಾನು ರಾಮ ಪ್ರಿಯಾ

ರಾಮಾನುಜ—ರಾಮಪ್ರಿಯಾ, ರಾಮಪ್ರಿಯಾ

ಧ್ವನಿ—ಹೌದು, ರಾಮಪ್ರಿಯಾ ರಾಮನಿಂದ ಪೂಜಿಸಿದ ರಂಗನಾಥ

ರಾಮಾನುಜ—ರಂಗನಾಥನೇ ಎಲ್ಲಿರುವೆ ?

ಧ್ವನಿ —ಬಲರಾಮನು ನಾರಾಯಣನ ಬಳಿ ತಂದಿಟ್ಟ ರಾಮಪ್ರಿಯಾ, ಯಾದವರಲ್ಲಿ ಪೂಜಿಸುತ್ತಿದ್ದ ರಾಮಪ್ರಿಯಾ

ರಾಮಾನುಜ—ಯಾದವರು ಪೂಜಿಸುತ್ತಿದ್ದ ರಾಮಪ್ರಿಯನೆ ? ತಿರುನಾರಾಯಣನ ಉತ್ಸವ ಮೂರ್ತಿಯೇ ? ಎಲ್ಲಿರುವೆ ? ನಿನಗಾಗಿ ಪರಿತಪಿಸುತ್ತಿರುವೆ. ನೀನು ಎಲ್ಲಿರುವ ? ಹೇಳು, ಹೇಳು, ಬೇಗ ಹೇಳು ?

ಧ್ವನಿ—ನಾನು ದೆಹಲಿ ಸುಲ್ತಾನನ ಬಳಿ ಇರುವೆ

ರಾಮಾನುಜ—ನಾನು ಧನ್ಯ ! ನಾನು ಧನ್ಯ !

ಧ್ವನಿ—ನೀನು ಈಗಲೇ ಹೋಗಿ ನನ್ನನ್ನು ಕರೆದುಕೊಂಡು ಬಾ

ರಾಮಾನುಜ—(ಕಣ್ಣುಗಳನ್ನು ಉಜ್ಜುತ್ತಾ ಎದ್ದು ಕುಳಿತುಕೊಳ್ಳುವರು) ಸಿಕ್ಕಿದ ಉತ್ಸವ ಮೂರ್ತಿ ರಾಮಪ್ರಿಯಾ । ದೆಹಲಿಯಲ್ಲಿದ್ದಾನೆ ಈಗಲೇ ಹೋಗಿ ತರಬೇಕು (ಎಂದು ಎದ್ದು ಹೋಗುವರು ದಾಶರಥಿಯ ಬಳಿ ಹೋಗಿ)

ರಾಮಾನುಜ—ದಾಶರಥಿಗಳೇ, ದಾಶರಥಿಗಳೇ ! ಏಳಿ, ಏಳಿ, ನಾವು ಈಗಲೇ ಹೊರಡಬೇಕು.

ದಾಶರಥಿ—(ದಿಗ್ಗನೆದ್ದು) ಗುರುಗಳೇ ಅಪಚಾರವಾಯಿತು ತಾವು ! ಇಲ್ಲಿ ! ಏನು ಹೇಳಿದಿರಿ ?

ರಾಮಾನುಜ—ಬೇಗ ಹೊರಡಿ, ಬೇಗ ಹೊರಡಿ, ರಾಮಪ್ರಿಯಾ, ರಾಮಪ್ರಿಯಾ !
(ಕುಣಿದಾಡುವರು)

ದಾಶರಥಿ—ಗುರುಗಳೇ, ಗುರುಗಳೇ ! ಏಕೆ ಹೀಗೆ ಕುಣಿದಾಡುವಿರಿ ? ಏನು ರಾಮಪ್ರಿಯಾ ?

ರಾಮಾನುಜ—(ಸ್ವಲ್ಪ ಹೊತ್ತು ಹಾಗೇ ಕುಣಿದಾಡುವರು) ರಾಮಪ್ರಿಯಾ ! ರಾಮಪ್ರಿಯಾ ! ಬಂದೇ ಬಂದೇ, ಓಡಿ ಬರುತ್ತಿರುವೆ.

ದಾಶರಥಿ—(ಅವರನ್ನು ಹಿಡಿದುಕೊಂಡು) ಗುರುಗಳೇ, ಗುರುಗಳೇ, ಏನು ಹೇಳಿ ?

ರಾಮಾನುಜ—(ಚೇತರಿಸಿಕೊಂಡು) ದಾಶರಥಿ ನಮ್ಮ ಉತ್ಸವ ಮೂರ್ತಿ ರಾಮಪ್ರಿಯ ದೆಹಲಿ ಸುಲ್ತಾನನ ಬಳಿ ಇರುವನು. ಬೇಗ ಹೋಗಿ ಅವನನ್ನು ಕರೆ ತರಬೇಕು

ಧಾಶರಥಿ—ನಾನು ಈಗಲೇ ಹೋಗಿ ವಿಷ್ಣುವರ್ಧನನಿಗೆ ತಿಳಿಸಿ, ತಕ್ಕ ಏರ್ಪಾಡು ಮಾಡಲು ಹೇಳುವೆನು,

ರಾಮಾನುಜ—ಬೇಗ ಏರ್ಪಾಡು ಮಾಡಿರಿ. ನಾವು ಹೋಗುವ.

(ದಾಶರಥಿ ಹೋಗುವರು ರಾಮಾನುಜ ಏನೋ ಯೋಚಿಸುತ್ತಾ ಒಳಗೆ ಹೋಗುವರು )

(ತೆರೆ ಬೀಳುವುದು)

## ದೃಶ್ಯ—೨

[ಸ್ಥಳ—ದೆಹಲಿ. ಬಾದಷಹನ ದರ್ಬಾರು. ಅತ್ಯಂತ ವಿಶಾಲವಾದ ದರ್ಬಾರ್ಹಾಲು ಗೋಡೆಗೆಲ್ಲಾ ಅನೇಕ ಗಿಡಮರ ಬಳ್ಳಿ ಹೂಗಳ ಕೆತ್ತನೆಯ ಕೆಲಸ ಮಾಡಿರುವುದು. ಮಧ್ಯೆ ಮಧ್ಯೆ ಬಣ್ಣ ಬಣ್ಣದ ಗಾಜುಗಳು ಅಂಟಿಸಿರುವುದು. ಕೆಂಪು ಪಚ್ಚೆ ಕಲ್ಲಿನ ಅಲಂಕಾರದ ಚಿತ್ರಗಳು ಇರುವುವು. ಮೇಲ್ಚಾವಣಿಯಲ್ಲಿ ವಿಧವಿಧವಾದ ಛತ್ರಿಯಾಕಾರದ ಚಿತ್ರಗಳು ಕೆತ್ತಿರುವುದು ಅಲ್ಲಲ್ಲೇ ಬಣ್ಣ ಬಣ್ಣದ ಗಾಜಿನ ತೂಗು ದೀಪಗಳು ತೂಗಾಡುತ್ತಿರುವುವು. ಮಧ್ಯೆ ಸುವರ್ಣಮಯವಾದ ಮುತ್ತು ಕೆಂಪಿನಿಂದ ಕೆತ್ತಿದ ಸಿಂಹಾಸನ ಹಾಕಿರುವುದು ಅಂಗ ರಕ್ಷಕರು ಎರಡೂ ಕಡೆಯೂ ಚಿನ್ನದ ದಂಡ ಹಿಡಿದು ನಿಂತಿರುವರು. ಒಂದು ಕಡೆ ಉದ್ದಕ್ಕೂ ವಜೀರರೂ (ಮಂತ್ರಿಗಳೂ) ವಂದಿಮಾಗಧರೂ, ಸೇನಾಪತಿಗಳೂ ಕುಳಿತಿರುವರು, ಮತ್ತೊಂದು ಕಡೆ ಸಂಗೀತ ವಿದ್ವಾಂಸರೂ, ಮೌಲ್ವಿಗಳೂ, ವಿದ್ವಾಂಸರೂ ಕುಳಿತಿರುವರು. ಬಾದಷಹನ ಆಗಮನವಾಗುವುದು. ಎತ್ತರವಾದ ಅಂದವಾದ ಮೈಕಟ್ಟಿನ ವ್ಯಕ್ತಿ. ಕೆಂಪು ಮಿಶ್ರವಾದ ಬಿಳಿಯ ಬಣ್ಣ. ಅಗಲವಾದ ವಿಶಾಲವಾದ ಕಣ್ಣುಗಳು, ಚೂಪಾದ ಮೂಗು, ದೊಡ್ಡ ಕಿವಿ, ದಾಡಿ

ಬಿಟ್ಟಿರುವನು ಮುಖದಲ್ಲಿ ದರ್ಪ ಎದ್ದು ಕಾಣುವುದು ಜರತಾರಿಯ ಸುರವಾಲ್ ಮತ್ತು ನಿಲುವಂಗಿ ತೊಟ್ಟಿರುವನು. ಹಿಂದೆ ಕತ್ತಿ ಹಿಡಿದ ಅಂಗ ರಕ್ಷಕರೂ ಬರುವರು.]

ವಂದಿಮಾಗಧರು—ಹೋಷಿಯಾರ್ ಬಾದಷಾಹ್ ಆ ರಹೇ ಹೈ, ಹೋಷಿಯಾರ್ (ಎಂದು ಹೇಳುತ್ತಿರುವರು ಬಾದಷಾಹ್ ಬಂದು ಸಿಂಹಾಸನಕ್ಕೆ ಸಲಾಂ ಮಾಡಿ ಕುಳಿತುಕೊಳ್ಳುವನು.)

ಬಾದಷಾಹ—ಸಬ್ ಬೈಠ್ ಜಾಯಿಯೆ ವಜೀರ್, ದಕ್ಷಿಣ್‌ಕೊ ಗಯೇ ಹಮಾರೆ ಸೈನಿಕ್ ಆಯೆ ? (ಎಲ್ಲಾ ಕುಳಿತುಕೊಳ್ಳಿ ಮಂತ್ರಿ, ದಕ್ಷಿಣ ದೇಶಕ್ಕೆ ಹೋಗಿದ್ದ ನಮ್ಮ ಸೈನಿಕರು ಬಂದರೆ)

ವಜೀರ್—ಆಕೋ ಹೈ ಸರಕಾರ್. (ಬಂದಿದೆ ಮಹಾಪ್ರಭು)

ಬಾದಷಾಹ—ಸೇನಾಪತೀ ಕೋ ಯಹಾ ಬುಲಾವ್ (ಸೇನಾಪತಿಯನ್ನು ಇಲ್ಲಿ ಕರೆ)

ವಜೀರ್—ಸಿಪಾಹಿ ಫೌಜುದಾರ್ ಕೊ ಯಹಾ ಬುಲಾವ್, (ಸಿಪಾಯಿ ಸೇನಾಪತಿಯನ್ನು ಇಲ್ಲಿ ಕರೆ ತಾ)

(ಸಿಪಾಯಿ ಹೋಗಿ ಸೇನಾಪತಿಯನ್ನು ಕರೆದುಕೊಂಡು ಬರುತ್ತಾನೆ)

ಸೇನಾಪತಿ—(ಮುಜುರೆ ಮಾಡಿ) ಆದಾಬ್ ಅರ್ಜ್ ಹೈ, ಹಮ್ಕೊ ಕಾಯ್‌ಕೊ ಬುಲಾಯಾ ಸರಕಾರ್ ? (ಮಹಾಸ್ವಾಮಿಗಳೇ ನಮಸ್ಕಾರ, ನಮ್ಮನ್ನು ಏಕೆ ಕರೆತರಿಸಿದಿರಿ ?)

ಬಾದಷಾಹ—ದಕ್ಷಿಣ್ ಕೊ ಗಯೇ ಥೇ ? (ದಕ್ಷಿಣಕ್ಕೆ ಹೋಗಿದ್ದಿರಾ ?)

ಸೇನಾಪತಿ—ಜೀಹಾ, ಗಯೇ ಥೇ (ಹೌದು, ಹೋಗಿದ್ದೆವು)

ಬಾದಷಾಹ—ಕ್ಯಾ ಕ್ಯಾ ಲೂಟ್ ಕೆ ಲಾಯೆ ? (ಏನೇನು ಕೊಳ್ಳೆ ಹೊಡೆದು ತಂದಿರಿ ?)

ಸೇನಾಪತಿ—ಬಹುತ್, ಬೇಜಾನ್ ಚೀಸೇ ಲಾಯೆ, ನವರತ್ನ, ಹೀರೇ, ಜವಾಹರಾತ್, ಚಾಂದಿ, ಸಬ್ ಚೀಸೇ ಲಾಯೆ. (ಬೇಕಾದಷ್ಟು ತಂದಿದ್ದೇವೆ ನವರತ್ನ, ವಜ್ರ ವೈಡೂರ್ಯ, ಚಿನ್ನ, ಬೆಳ್ಳಿ ಎಲ್ಲಾ ರೀತಿಯ ಪದಾರ್ಥಗಳನ್ನು ತಂದಿದ್ದೇವೆ)

ಬಾದಷಾಹ—ಔರ್ ಕ್ಯಾ ಕ್ಯಾ ಲಾಯೆ ? ದೇವಾಲಯ್ ಕೊ ಲೂಟೆ ನಹೀಂ ? (ಇನ್ನೇನು ತಂದಿರಿ ? ದೇವಾಲಯವನ್ನು ಕೊಳ್ಳೆ ಹೊಡೆದಿರೆ ?)

ಸೇನಾಪತಿ—ಲೂಟೇ ಹೈ, ಬಹುತ್ ಸೀ ಮೂರ್ತಿಯಾ ಲಾಯೀ ಹೈ (ಲೂಟಿ ಮಾಡಿದ್ದೇವೆ. ಬಹಳ ಮೂರ್ತಿಗಳನ್ನು ತಂದಿದ್ದೇವೆ)

ಬಾದಷಾಹ—ಅಚ್ಛಾ, ಸಬ್ಕೊ ಮೂರ್ತಿಯೋಂಕಿ ಶಾಲಾಮೆ ಬಂದ್ ಕರ್ದೊ. (ಒಳ್ಳೆಯದು, ಎಲ್ಲವನ್ನು ಮೂರ್ತಿಗಳ ಕೊಠಡಿಯಲ್ಲಿ ತುಂಬಿ ಬೀಗ ಹಾಕು)

(ಒಬ್ಬ ದೂತ ಬಂದು ಸಲಾಂ ಮಾಡಿ)

ದೂತ—ಆದಾಬ್ ಆರ್ಜ್ ಹೈ, ಬಾಹರ್ ಕೋಯಿ ಆಯೇ ಹೈ. ಆಪ್ಕೊ ದೇಖ್ನಾ ಚಾಹ್ತೆ ಹೈ. (ನಮಸ್ಕಾರಗಳು ಹೊರಗೆ ಯಾರೋ ಬಂದಿದ್ದಾರೆ. ತಮ್ಮನ್ನು ನೋಡಲು ಅಪೇಕ್ಷಿಸುತ್ತಾರೆ)

ಬಾದಷಾಹ—ಉನ್ಕೊ ಅಂದರ್ ಬುಲಾವ್. (ಅವರನ್ನು ಒಳಗೆ ಕರೆ)

ದೂತ—ಅಚ್ಛಾ ಸರ್ಕಾರ್. (ಮುಜುರೆ ಮಾಡಿ ಹೋಗುವನು)

(ದೂತನ ಜೊತೆ ರಾಮಾನುಜರೂ ಅವರ ಶಿಷ್ಯರು ಬರುವರು, ರಾಮಾನುಜರು ಒಳ್ಳೆಯ ಭಾರಿ ಉಡುಗೆ ತೊಟ್ಟಿರುವರು. ತಲೆಗೆ ಜರಿಯ ರುಮಾಲನ್ನು ಸುತ್ತಿರುವರು. ಮುಖದಲ್ಲಿ ಊರ್ಧ್ವ ಪುಂಡ್ರವು ಶೋಭಿಸುತ್ತಿರುವುದು. ವರ್ಚಸ್ಸಿನಿಂದ ಕೂಡಿದ ಮುಖ. ಹೊಳೆಯುತ್ತಿರುವ ಕಣ್ಣುಗಳು)

ರಾಮಾನುಜ—ಸಲಾಂ. (ತಮಗೆ ನಮಸ್ಕಾರ)

ಬಾದಷಾಹ—ಅದಾಬ್, ಆಯಿಯೆ, ಆಯಿಯೆ (ನಮಸ್ಕಾರ, ಬನ್ನಿ ಬನ್ನಿ) ಇನ್ ಸಬ್ಕೊ ಬಿಠಾವೊ ವಜೀರ್. (ಇವರನ್ನೆಲ್ಲಾ ಕೂರಿಸು ಮಂತ್ರಿ) ಮಂತ್ರಿಯು ಎಲ್ಲರಿಗೂ ಆಸನ ತೋರಿಸುವನು.

ಬಾದಷಾಹ—ಅಚ್ಛಾ, ಆಪ್ ಕಹಾಂ ಸೇ ಆಯೇ ? ಕ್ಯಾ ಬಾತ್ ಹೈ ? (ಒಳ್ಳೆಯದು, ತಾವೆಲ್ಲಿಂದ ಬಂದಿರಿ ? ಏನು ಸಮಾಚಾರ ?)

ರಾಮಾನುಜ—ಹಮ್ ದಕ್ಷಿಣ್ ಕೇ ಹೈ. ಹಮ್ ಕುಛ್ ಕಾಮ್ ಸೆ ಆಯೆ (ನಾವು ದಕ್ಷಿಣ ದೇಶದವರು. ಸ್ವಲ್ಪ ಕೆಲಸವಾಗಿ ಬಂದೆವು)

ಬಾದಷಾಹ—ಕೌನ್ಸಾ ಕಾಮ್, ಅರ್ಜ್ ಕೀಜಿಯೆ ? (ಏನು ಕೆಲಸ ಹೇಳಿ ?)

ರಾಮಾನುಜ—ಹಮೇ ರಾಮಪ್ರಿಯಾ ಕಿ ಮೂರ್ತಿ ಚಾಹೀಯೆ ಸುನಾ ಹೈ ಆಪ್ಕೆ ಯಹಾಂ ಬಹುತ್ಸಿ ಮೂರ್ತಿಯಾಂ ಹೈ. ವೇ ಹಮಾರೆ ಕುಲದೇವ್ ಹೈ. (ನಮಗೆ ರಾಮಪ್ರಿಯನ ಮೂರ್ತಿ ಬೇಕು. ತಮ್ಮಲ್ಲಿ ಬಹಳ ಮೂರ್ತಿಗಳಿವೆ ಎಂದು ಕೇಳಿದೆ. ಅವರು ನಮ್ಮ ಕುಲದೈವ)

ಬಾದಷಾಹ—ಹಾಂ, ಹಮಾರೆ ಯಹಾಂ ಬಹುತ್ಸೀ ಮೂರ್ತಿಯಾ ಹೈ. ನ ಜಾನೆ ಉಸ್ಮೆ ಕೌನ್ ರಾಮಪ್ರಿಯಾ ಕೀ ಮೂರ್ತಿ ಹೈ ? ಕೌನ್ ಢೂಂಡೇಂಗೆ ಅಬ್ ? (ಹೌದು, ನಮ್ಮಲ್ಲಿ ಬೇಕಾದಷ್ಟು ಮೂರ್ತಿಗಳಿವೆ. ಅದರಲ್ಲಿ ಯಾವುದು ರಾಮಪ್ರಿಯನ ಮೂರ್ತಿಯೋ. ಯಾರು ಹುಡುಕುವರು ?)

ರಾಮಾನುಜ—ಹಮೇ ಮಾಲೂಮ್ ಹೈ, ಹಮ್ ಡೂಂಡೇಂಗೆ. ಹಮೆ ರಾಮಪ್ರಿಯಾನೆ ಬುಲಾಯಾ ಹೈ. (ನಮಗೆ ಗೊತ್ತು, ನಾವು ಹುಡುಕುವೆವು. ನಮ್ಮನ್ನು ರಾಮಪ್ರಿಯಾ ಬರಹೇಳಿದ್ದಾನೆ)

ಬಾದಷಾಹ—ಕೈಸೆ ಢೂಂಡೇಂಗೆ ? ಇತನೇ ಬಡೇ ಕಮರೇ ಮೆ ಉತನೀ ಮೂರ್ತಿಯಾ ಹೈ. (ಹೇಗೆ ಹುಡುಕುವಿರಿ ಇಷ್ಟು ದೊಡ್ಡ ಕೊರಡಿ ಯಲ್ಲಿ ಅಷ್ಟೊಂದು ಮೂರ್ತಿಗಳಿವೆ)

ರಾಮಾನುಜ—ಹಮೇ ವಹ್ ಜಗಹ್ ದಿಖಾಇಯೆ, ಹಮ್ ಢೂಂಡೇಂಗೆ. (ನಮಗೆ ಆ ಜಾಗ ತೋರಿಸಿ ನಾವು ಹುಡುಕುವೆವು)

ಬಾದಷಾಹ—ಅಚ್ಛಾ ಅಭೀ ಧೂಂಗ ವಜೀರ್ ಇನ್ಕೊ ಮೂರ್ತಿಯೋಂ ಕೆ ಕಮರೇ ಮೇ ಲೇ ಚಲೋ ವೇ ಜೋ ಮಾಂಗೆ ಉಸೆ ದೇದೋ. ಜಾಯಿಯೆ ಜಾಕೆ ಲೀಜಿಯೆ, (ಒಳ್ಳೆಯದು, ಈಗಲೇ ಕೊಡುವೆನು. ಮಂತ್ರಿ ಇವರನ್ನು ಮೂರ್ತಿಗಳ ಕೊರಡಿಗೆ ಕರೆದುಕೊಂಡು ಹೋಗು ಅವರು ಯಾವುದನ್ನು ಕೇಳುತ್ತಾರೊ ಅದನ್ನು ಕೊಡು ಹೋಗಿ ತೆಗೆದುಕೊಳ್ಳಿ)

ರಾಮಾನುಜ—ಅಚ್ಛಾ (ರಾಮಾನುಜ, ವಜೀರರು ಹೋಗುವರು)

(ಅರಮನೆಯ ಒಳಗಡೆ ಒಂದು ಕೊರಡಿ, ಆ ಕೊರಡಿಯು ಬರೀ ವಿಗ್ರಹದಿಂದ ತುಂಬಿರುವುದು ರಾಮಾನುಜರು ಒಂದೊಂದು ವಿಗ್ರಹವನ್ನು ತಿರುಗಿಸಿ, ತಿರುಗಿಸಿ ನೋಡುವರು )

ರಾಮಾನುಜ—ಇದು ಅಲ್ಲ ಇದರಲ್ಲಿ ರಂಗನ ಕಳೆಯೇ ಇಲ್ಲ. ಇನ್ನೊಂದು ವಿಗ್ರಹ ವನ್ನು ನೋಡಿ ಇದೂ ಅಲ್ಲ. (ಹೀಗೆಯೇ ಹಲವಾರು ವಿಗ್ರಹಗಳನ್ನು ನೋಡಿ) ವಜೀರ್ ಇನ್ಮೆ ಕೋಯೀ ನಹೀ ಹೈ ಹಮಾರಾ ಕುಲದೇವ್ ಯಹಾಂ ನಹೀ ಹೈ. (ಮಂತ್ರಿಗಳೆ ಇದರಲ್ಲಿ ಯಾವುದೂ ಅಲ್ಲ. ನಮ್ಮ ಕುಲದೈವ ಇಲ್ಲಿ ಇಲ್ಲ)

ವಜೀರ್—ಆಯೀಯೆ ಬಾದಷಾಹ್ ಕೆ ಪಾಸ್ ಜಾಯೆಂಗೆ (ಬನ್ನಿ ಚಕ್ರವರ್ತಿಯ ಬಳಿ ಹೋಗೋಣ)

(ಇಬ್ಬರೂ ಬಾದಷಾಹನ ಬಳಿ ಬರುವರು)

ಬಾದಷಾಹ—ಕ್ಯಾ ಸಾಬ್, ಆಪ್ಕಾ ಕಾಂ ಹೋಗಯಾ ? (ಏನು, ತಮ್ಮ ಕೆಲಸ ವಾಯಿತೆ ?)

ರಾಮಾನುಜ—ನಹೀ, ಅಭಿ ನಹೀ ಮಿಲಾ (ಇಲ್ಲ, ಇನ್ನೂ ಸಿಗಲಿಲ್ಲ)

ಬಾದಷಾಹ—ದೇಖೋ ಮೇರೆ ಲಡ್ಕೀ ಕೆ ಪಾಸ್ ಏಕ್ ಮೂರ್ತಿ ಹೈ ವಹ್ ಉಸೆ ಕಿಸೀ ಕೊ ನಹೀ ದೇತಿ (ನೋಡಿ. ನನ್ನ ಮಗಳ ಹತ್ತಿರ ಒಂದು ಮೂರ್ತಿ ಇದೆ. ಅವಳು ಯಾರಿಗೂ ಅದನ್ನು ಕೊಡುವುದಿಲ್ಲ)

ರಾಮಾನುಜ—ಥೋಡಾ ದಿಖಾವೋ, ದೇಖೇಂಗೆ. (ಸ್ವಲ್ಪ ತೋರಿಸಿ, ನೋಡೋಣ)

ಬಾದಷಾಹ—ಅಚ್ಛಾ. ಮುಝೀ ಕೊ ಜಾನಾ ಪಡೇಗ ಚಲೋ. (ಒಳ್ಳೆಯದು, ನಾನೇ ಹೋಗಬೇಕು, ನಡಿಯಿರಿ)

(ಇಬ್ಬರೂ ಹೋಗುವರು. ಒಳಗೆ ಜನಾನ, ಷಹಜಾದಿಯ ಕೊಠಡಿ. ಹೆಚ್ಚಿನ ಆಡಂಬರವೇನೂ ಇಲ್ಲ ಒಂದು ಪಲ್ಲಂಕ ಹಾಸಿದೆ. ಅದರ ಮೇಲೆ ಜರತಾರಿ ದುಪ್ಪಟಿ ಹಾಸಿದೆ. ಕುರ್ಚಿಗಳೂ ಇವೆ. ಮೇಜಿನ ಮೇಲೆ ಹೂದಾನಿ ಇಟ್ಟಿದೆ. ಇಬ್ಬರು ದಾಸಿಯರಿದ್ದಾರೆ. ಷಹಜಾದಿಯು ರಾಮಪ್ರಿಯನ ಜೊತೆ ಆಟವಾಡುತ್ತಿರುತ್ತಾಳೆ.)

ಬಾದಷಾಹ—(ಒಳಗೆ ಪ್ರವೇಶಿಸಿ) ಷಹಜಾದಿ, ಷಹಜಾದಿ.

ಷಹಜಾದಿ—ಕ್ಯಾ ಹೈ ಪಿತಾಜಿ ?

ರಾಮಾನುಜ—(ಒಳಗೆ ಪ್ರವೇಶಿಸುತ್ತಲೇ ರಾಮಪ್ರಿಯನ ವಿಗ್ರಹ ನೋಡಿ ಹಾಗೆ ಸ್ವಲ್ಪ ಹೊತ್ತು ನಿಲ್ಲುತ್ತಾರೆ, ಅದನ್ನೇ ನೆಟ್ಟ ದೃಷ್ಟಿಯಿಂದ ನೋಡುತ್ತಿರುತ್ತಾರೆ.)

ಬಾದಷಾಹ—ಕ್ಯಾ ಆಪ್ ಖಡೇ ಖಡೇ ದೇಖ್ತೇ ರಹ್ ಗಯೇ ? (ಏನು ತಾವು ಹಾಗೇ ನೋಡುತ್ತಾ ನಿಂತಿರಿ)

ರಾಮಾನುಜ—ಯಹೀ ಹಮಾರೆ ಕುಲದೇವ್ ಹೈ ! ಯಹೀ ಮೇರೀ ಮೂರ್ತಿ ಹೈ ! ದೇದೀಜೀಯೆ, ಮುಝೇ ದೇದೀಜೀಯೆ, ಕ್ಯಾ ಮೈ ಉಠಾ ಕೆ ಜಾ ವೂಂ ? (ಇದೇ ನನ್ನ ಕುಲದೈವ ! ಇದೇ ನನ್ನ ಮೂರ್ತಿ ! ಕೊಟ್ಟುಬಿಡಿ, ನನಗೆ ಕೊಟ್ಟುಬಿಡಿ ಏನು ನಾನು ಎತ್ತಿಕೊಂಡು ಹೋಗಲಿ ?)

ಷಹಜಾದಿ—ನಹೀ, ನಹೀ · ಯಹ್ ಮೇರೀ ಹೈ. (ಇಲ್ಲ, ಇಲ್ಲ. ಇದು ನನ್ನದು)

ಬಾದಷಾಹ—ಅಚ್ಛಾ, ಯಹ್ ತುಮ್ಹಾರಿ ಹೈ ? (ಒಳ್ಳೆಯದು, ಇದು ನಿನ್ನದೆ)

ಷಹಜಾದಿ—ಹಾಂ, ಯಹ್ ಮೇರೀ ಹೈ, ಮೈ ಇಸೆ ಕಿಸೀ ಕೋ ನಹೀ ದೇತೀ. (ಹೌದು, ಇದು ನನ್ನದು, ನಾನು ಯಾರಿಗೂ ಕೊಡುವುದಿಲ್ಲ ?)

ರಾಮಾನುಜ—ಮುಝೇ ಯಹೀ ಚಾಹಿಯೆ ಔರ್ ಕೋಯಿ ಮೂರ್ತಿ ನಹೀ ಚಾಹಿಯೆ. (ನನಗೆ ಇದೇ ಬೇಕು ಮತ್ಯಾವ ಮೂರ್ತಿಯೂ ಬೇಡ)

ಷಹಜಾದಿ—ಮೈ ಇಸೆ ಏಕ್ ಕ್ಷಣಭಿ ನ ಛೋಡ್ ಸಕ್ತಿ. (ನಾನು ಇದನ್ನು ಒಂದು ಕ್ಷಣವೂ ಬಿಟ್ಟಿರಲಾರೆ)

ರಾಮಾನುಜ—ಇಸ್ಕೇ ಲಿಯೆ ಮೈ ಸುದೂರ್ ದಕ್ಷಿಣ್ ಸೆ ಆಯಾ ಹೂಂ, (ಇದಕ್ಕಾಗಿ ನಾನು ದಕ್ಷಿಣ ದೇಶದಿಂದ ಬಂದಿದ್ದೇನೆ ಕಿತ್ತುಕೊಳ್ಳಲು ಹೋಗುವರು)

ಷಹಜಾದಿ—ಆಪ್ ಮಜ್‌ಬೂರಿ ಸೇ ಲೇ ಗಯೇ ತೊ ಮೈ ಮರ್ ಜಾಊಂಗಿ. (ತಾವು ಬಲತ್ಕಾರವಾಗಿ ತೆಗೆದುಕೊಂಡರೆ, ನಾನು ಸತ್ತು ಹೋಗುವೆನು)

ಬಾದಷಾಹ—ಜರಾ ರಹರೀಯೆ, ಷಹಜಾದಿ ಇಸೆ ಇನ್ಕೊ ದೇದೊ. ಬಡೆ ದೂರ್ ಸೆ ಆಯೆ ಹೈ (ಸ್ವಲ್ಪ ತಾಳಿ, ಮಗಳೆ ಇದನ್ನು ಅವರಿಗೆ ಕೊಟ್ಟುಬಿಡು ಬಹಳ ದೂರಿನಿಂದ ಬಂದಿದ್ದಾರೆ)

ಷಹಜಾದಿ—ಬಡೇ ದೂರ್ ಸೆ ಆಯೆತೊ ಕ್ಯಾ? ಮೈ ನಹೀ ದೂಂಗಿ ಯಹ್ ಮೇರಾ ಪ್ಯಾರಾ ಗುಡಿಯಾ ಹೈ (ಬಹಳ ದೂರದಿಂದ ಬಂದಿದ್ದರೇನು? ನಾ ಕೊಡುವುದಿಲ್ಲ ಇದು ನನ್ನ ಮುದ್ದಿನ ಗೊಂಬೆ)

ಬಾದಷಾಹ್—ಮೈ ತುಮ್ಹೆ ಔರ್ ಬಹುತ್ಸೆ ವಿಗ್ರಹ್ ದೂಂಗ ಮೈನೆ ದೇನೇ ಕಾ ವಾದಾ ಕಿಯಾ ಹೈ (ನಾನು ನಿನಗೆ ಬೇಕಾದಷ್ಟು ವಿಗ್ರಹ ಕೊಡುವೆನು. ನಾನು ಇವರಿಗೆ ಕೊಡುತ್ತೇನೆ ಎಂದು ಮಾತು ಕೊಟ್ಟಿದ್ದೇನೆ)

ಷಹಜಾದಿ—ಮೈ ಇಸೆ ಕಭೀ ನಹೀ ದೂಂಗಿ. ನಹೀ ದೂಂಗಿ ನಹೀ ದೂಂಗಿ ಯಹ್ ಮೆರೀ ಹೈ ಯಹ್ ಮೆರೀ ಹೈ ಮೈ ಮರ್ ಜಾಊಂಗಿ ಮೈ ಮರ್ ಜಾಊಂಗೀ (ಎಂದು ಜೋರಾಗಿ ರೋಧಿಸಲು ಶುರುಮಾಡುವಳು) ನಾನೆಂದೂ ಕೊಡೆ ಎಂದೂ ಕೊಡೆ ಎಂದೂ ಕೊಡೆ ಕೊಡುವುದಿಲ್ಲ ಇದು ನನ್ನದು ಇದು ನನ್ನದೂ ನಾ ಸತ್ತೆ ನಾ ಸತ್ತು ಹೋಗುವೆ (ಎಂದು ರೋಧಿಸುವಳು)

ಬಾದಷಾಹ್—(ಸ್ವತಃ) ಅಬ್ ಮೈ ಕ್ಯಾ ಕರೂ? ಮೈ ಇನ್ಕೊ ಬೋಲ್ ದಿಯಾ ಹೈ, ಯಹ್ ಲಡಕೀ ಇಸ್‌ಪರ್ ಜಾನ್ ದೇ ರಹೀ ಹೈ ಅಚ್ಚಾ ಏಕ್ ಉಪಾಯ್ ಕರೂಂಗ (ಜೋರಾಗಿ) ಜೋಗೀ ಸಾಬ್, ಆಪ್ಕೊ ಯಹ್ ವಿಗ್ರಹ್ ಚಾಹಿಯೇನ! ಉಸ್ನೇ ಆಪ್ಕೊ ಯಹಾಂ ತಕ್ ಬುಲಾಯಾ ಹೈ ಔರ್ ಆಪ್ನೇ ಕೊ ಲೇನೇ ಕೊ ಕಹಾ ಹೈನ? (ಈಗ ನಾನೇನು ಮಾಡಲಿ? ನಾನು ಇವರಿಗೆ ಮಾತುಕೊಟ್ಟಿದ್ದೇನೆ; ಈ ಹುಡುಗಿ ಇದರ ಮೇಲೆ ಪ್ರಾಣ ಬಿಡುತ್ತಿದ್ದಾಳೆ ಒಳ್ಳೆಯದು ಒಂದು ಉಪಾಯ ಮಾಡುವೆನು (ಜೋರಾಗಿ) ಸನ್ಯಾಸಿಗಳೇ, ನಿಮಗೆ ಈ ವಿಗ್ರಹವು ಬೇಕಲ್ಲವೆ? ಅದು ನಿಮ್ಮನ್ನು ಇಲ್ಲಿವರೆಗೆ ಕರೆಸಿದೆಯಲ್ಲವೆ? ಮತ್ತು ತನ್ನನ್ನು ಕರೆದುಕೊಂಡು ಹೋಗು ಎಂದು ಹೇಳಿದೆಯಲ್ಲವೆ?)

ರಾಮಾನುಜ—ಹಾಂ, ಹಾಂ, ಉಸೀನೆ ಬುಲಾಯ, ಉಸೀನೆ ಬುಲಾಯ ಔರ್ ಬತಾಯ. (ಹೌದು, ಹೌದು, ಅದೇ ಕರೆಯಿತು, ಅದೇ ಕರೆಯಿತು ಮತ್ತು ಹೇಳಿತು)

ಬಾದಷಾಹ್—ತೊ, ದೇಖೊ, ತುಮ್ ಉಸೆ ತುಮ್ಹಾರೆ ಪಾಸ್ ಬುಲಾವೊ ವಹ್ ಆಯಾತೊ ಲೇಕೆ ಜಾವೊ ಬೇಟಿ ತುಂ ದೂರ್ ಆಜಾವೊ (ಹಾಗಾದರೆ ಅದನ್ನು ನಿನ್ನ ಹತ್ತಿರ ಕರೆ ಅದು ಬಂದರೆ ತೆಗೆದುಕೊಂಡು ಹೋಗು. ಮಗು ನೀ ದೂರ ಬಂದುಬಿಡು)

ರಾಮಾನುಜ—(ಭಕ್ತಿಯಿಂದ ವಿಗ್ರಹಕ್ಕೆ ನಮಸ್ಕರಿಸಿ) ರಾಮಪ್ರಿಯಾ, ರಾಮಪ್ರಿಯಾ, ಬಾ ಮಗು, ನಿನಗಾಗಿ ಇಷ್ಟೆಲ್ಲ ಪರದಾಡುತ್ತಿರುವೆ (ಝಣ ಝಣ ಎಂದು ಗೆಜ್ಜೆಯ ಸದ್ದು ಕೇಳಿಸುವುದು)

ಬಾದಶಾಹ—ಯಹ್ ಕ್ಯಾ ಪಾಯಲ್ ಕಾ ಝುಂಕಾರ್. (ಇದೇನು ಗೆಜ್ಜೆಯ ಸದ್ದು ಕೇಳಿಸುತ್ತಿರುವುದು ?) (ರಾಮಪ್ರಿಯನ ವಿಗ್ರಹವು ಮಂಚದ ಮೇಲೆಯೆ ಚಲಿಸಲಾರಂಭಿಸುವುದು)

ಷಹಜಾದಿ—ಬಾಪುಜೀ, ಬಾಪುಜೀ ! ದೇಖೋ ಮೇರೆ ಗುಡಿಯಾ ನಾಚ್ ರಹಾ ಹೈ. (ಅಪ್ಪಾ, ಅಪ್ಪಾ ! ನೋಡು ನನ್ನ ಗೊಂಬೆ ಕುಣಿಯುತ್ತಿದೆ)

ಬಾದಶಾಹ—ಅಚ್ಛಾ, ಕಿತನಾ ಅಚ್ಛಾ ನಾಚ್ ರಹಾ ಹೈ ! (ಆಹಾ, ಎಷ್ಟು ಚೆನ್ನಾಗಿ ಕುಣಿಯುತ್ತಿದೆ !) (ರಾಮಾನುಜರು ಧ್ಯಾನಮಗ್ನರಾಗಿರುವರು)

ಬಾದಶಾಹ—ದೇಖ್ ಬೇಟಿ, ದೇಖ್ ಬೇಟಿ, ಗುಡಿಯಾ ನೀಚೆ ಉತರ್ ರಹಾ ಹೈ ! (ನೋಡು ಮಗು, ನೋಡು, ಬೊಂಬೆ ಕೆಳಗೆ ಇಳಿಯುತ್ತಿದೆ)

ಷಹಜಾದಿ—ಬಾಬಾ, ಬಾಬಾ ! ದೇಖೋ, ದೌಡ್ ರಹಾ ಹೈ ? (ಅಪ್ಪಾ, ಅಪ್ಪಾ ! ನೋಡು, ಓಡುತ್ತಿದೆ ?)

ಬಾದಶಾಹ—ದೇಖೋ, ದೇಖೋ, ರಾಮಾನುಜ್ ಕೆ ಪಾಸ್ ಜಾ ರಹಾ ಹೈ. (ನೋಡು, ನೋಡು, ರಾಮಾನುಜರ ಹತ್ತಿರ ಹೋಗುತ್ತಿದೆ)

ಷಹಜಾದಿ- ದೇಖ್ ಅಬ್ಬಾ ! ರಾಮಾನುಜ್ಕೊ ಪಕಡ್ಕೆ ಕೂದ್ ರಹಾ ಹೈ. ಉಸ್ಕಾ ಕಿರೀಟ ದೇಖೊ ! (ನೋಡಪ್ಪಾ ! ರಾಮಾನುಜರನ್ನು ಹಿಡಿದು ಕುಣಿಯುತ್ತಿದೆ. ಅದರ ಕಿರೀಟ ನೋಡು !)

ಬಾದಶಾಹ ಹಾಂ, ಹಾಂ, ದೇಖಾ ಕಿತನಾ ಅಚ್ಛಾ ನಾಚ್ ರಹಾ ಹೈ (ಹೌದು, ಹೌದು, ನೋಡ್ದೆ ! ಎಷ್ಟು ಚೆನ್ನಾಗಿ ಕುಣಿಯುತ್ತಿದೆ)

ಷಹಜಾದಿ - ಉಸ್ಕಾ ಪೀತಾಂಬರ್ ದೇಖೊ, ಗಲೇ ಕೆ ಮೋತೀ ಕ ಮಾಲಾ ದೇಖೋ. (ಅದರ ಪೀತಾಂಬರ ನೋಡು, ಕತ್ತಿನ ಮುತ್ತಿನ ಹಾರ ನೋಡು)

ಬಾದಶಾಹ- -ಮಾಥೆ ಕಾ ತಿಲಕ್ ದೇಖೋ, ಉಸ್ಕಾ ರೂಪ್ ದೇಖೋ, ಕರೋಡ್ ಮದನೋಂಕು ಲಜಾ ರಹಾ ಹೈ. (ಹಣೆಯ ತಿಲಕ ನೋಡು, ಅದರ ರೂಪ ನೋಡು, ಕೋಟಿ ಮದನರ ಲಜ್ಜಿಸುವಂತಿದೆ) (ರಾಮಪ್ರಿಯಾ ರಾಮಾನುಜರನ್ನು ಗಟ್ಟಿಯಾಗಿ ತಬ್ಬುವನು.)

ರಾಮಾನುಜ— ಎನ್ ಶೆಲ್ವಪಿಳ್ಳಾಯ್, ವಾರಾಯ್, ಎನ್ ಸಂಪತ್ಕುಮಾರನೇ ವಾರಾಯ್ (ನನ್ನ ಮುದ್ದು ಮಗನೇ ಬಾ, ನನ್ನ ಸಂಪತ್ಕುಮಾರನೇ ಬಾಪ್ಪ ಎಂದು ಮಗನನ್ನು ತಬ್ಬಿಕೊಳ್ಳುವಂತೆ ತಬ್ಬಿಕೊಂಡು ಮಡಿಲಲ್ಲಿ ಕೂರಿಸಿಕೊಳ್ಳುವರು.)

ಬಾದಶಾಹ—ಕ್ಯಾ ಯಹ್ ಸಪನಾ ಹೈ ಯಾ ಸಚ್ಚೀ ಘಟನಾ ! (ಎಂದು ಕಣ್ಣುಜ್ಜಿಕೊಳ್ಳುವನು) ಹುಜೂರ್, ಆಪ್ಕೆ ಕಾರಣ್ ಆಜ್ ಹಮೇ ಭಗವಾನ್ಕಾ ದರ್ಶನ್ ಹುವಾ ! ಆಪ್ ಸಚ್ಚೇ ಭಕ್ತ್ ಹೈ. ಕ್ಯಾ ಕರೂ ? ಮೈ ಆಪ್ನೆ ಜಾತ್ಕೊ ನ ಛೋಡ್ ಸಕ್ತಾ : ಅಬ್ ಆಪ್ ಅಪ್ನೆ ಬೇಟೆ ಕೊ ಲೇ

ಜಾಯಿಯೆ (ಇದೇನು ! ಇದು ಸ್ವಪ್ನವೋ ಅಥವಾ ನಿಜವಾದ ಘಟನೆಯೋ ! ಸ್ವಾಮಿ ತಮ್ಮಿಂದ ಈ ದಿನ ನಮಗೆ ಭಗವಂತನ ದರ್ಶನ ವಾಯಿತು ತಾವು ನಿಜವಾದ ಭಕ್ತರು ಏನು ಮಾಡಲಿ ? ನಾನು ನನ್ನ ಜಾತಿ ಬಿಡಲಾರೆ, ಈಗ ತಾವು ತಮ್ಮ ಮಗನನ್ನು ಕರೆದುಕೊಂಡು ಹೋಗಿ)

ಬಾದಷಾಹ—ಚಪರಾಸೀ, ವಜೀರ್ ಕೊ ಬುಲಾವೊ. (ಮಂತ್ರಿಯನ್ನು ಕರೆ)

(ಚಪರಾಸಿ ಹೋಗುವನು ಮಂತ್ರಿ ಬರುವನು)

ವಜೀರ್—ಕ್ಯಾ ಸರ್‌ಕಾರ್ ?

ಬಾದಷಾಹ—ಇನ್ಕೊ ಬಹುತ್ಸಾ ಹೀರೇ, ಜವಾಹರಾತ್, ಸೋನಾ ಆದಿ ದೇಕರ್, ಮೇನಾಮೆ ಬಿಠಾ ಕೆ ಸಾರೀ ಇಜ್ಜತ್ ಕೆ ಸಾಥ್ ಭೇಜೋ. (ಇವರಿಗೆ ಬೇಕಾದಷ್ಟು ವಜ್ರ, ವೈಡೂರ್ಯ, ಚಿನ್ನ, ಒಡವೆ ಮೊದಲಾದುವನ್ನು ಕೊಟ್ಟು, ಮೇನೆಯಲ್ಲಿ ಕೂರಿಸಿ, ಮರ್ಯಾದೆ ಇಂದ ಕಳಿಸು)

ವಜೀರ್—ಅಚ್ಛಾ ಜಹಾಂಪನಾಹ್, ಸಾಬ್ ಆಯೀಯೆ. (ಆಗಲಿ ಮಹಾಸ್ವಾಮಿ, ಸ್ವಾಮಿ ಬನ್ನಿ)

ರಾಮಾನುಜ—ಆಪ್ಕೊ ಲಾಖ್ ಮುಬಾರಕ್ ಮೈ ಜಾತಾ ಹೂಂ. (ತಮಗೆ ಲಕ್ಷ ಧನ್ಯವಾದಗಳು. ನಾನು ಬರುತ್ತೇನೆ) (ಇಬ್ಬರೂ ಹೋಗುವರು)

ಷಹಜಾದಿ—ಬಾಪೂ ಬಾಪೂ ಮೇರಾ ಗುಡ್ಡಿ ! ಮೇರೆ ದೇವ್ ಕೊ ಲಾಕೆ ದೇದೋ, ದೇದೋ ನಾ ಮೇರೆ ಗುಡಿಯೋಕೊ (ಅಪ್ಪಾ ಅಪ್ಪಾ ನನ್ನ ಬೊಂಬೆ, ನನ್ನ ದೈವನ ತಂದುಕೊಡು ತಂದುಕೊಡು ನನ್ನ ಗೊಂಬೆಯಾ (ರೋಧಿಸುವಳು)

ಬಾದಷಾಹ—ಮತ್ ರೋವೋ ಬೇಟಿ, ಮತ್ ರೋವೋ ಮೈ ದೂಸರ ಗುಡ್ಡಿ ಲಾ ದೂಂಗ ಹಮಾರೆ ಪಾಸ್ ಬಹುತ್ಸೆ ಗುಡ್ಡಿ ಹೈನಾ ! ಉನ್ಮೆ ಜಿತನಾ ಚಾಹಿಯೆ ಲೇ ಲೇನಾ ! ರೋನಾ ಮತ್, ಆವೋ ಮೇರೆ ಪಾಸ್, ಮೇರಿ ಬಚ್ಚಿ. (ಅಳಬೇಡ ಮಗು ಅಳಬೇಡ, ನಾನು ಬೇರೆ ಗೊಂಬೆ ಕೊಡುವೆ, ನಮ್ಮ ಹತ್ತಿರ ಬೇಕಾದಷ್ಟು ಬೊಂಬೆಗಳಿವೆಯಲ್ಲಾ ! ಅವುಗಳಲ್ಲಿ ಎಷ್ಟು ಬೇಕೋ ಅಷ್ಟನ್ನು ತೆಗೆದುಕೊ ! ಅಳಬೇಡ. ಬಾ ಮಗು ನನ್ನ ಹತ್ತಿರ.) (ಮಗಳನ್ನು ತಬ್ಬಿಕೊಂಡು ಸಮಾಧಾನ ಮಾಡುತ್ತಿರುವನು)

(ತೆರೆ ಬೀಳುವುದು)

## ದೃಶ್ಯ—೩

[ಬಾದಷಾಹನ ಅರಮನೆ. ಬೀಬಿ ಚಿಂತಾಮಗ್ನಳಾಗಿ, ಪೆದ್ದಾಗಿ ಕುಳಿತಿರುವಳು. ಬೇಗಂ ಮತ್ತು ಬಾದಷಾಹ ಬರುವರು.]

ಬೇಗಂ—ಬೇಬಿ ಉಠೋ ? ಕ್ಯೋಂ ಐಸಾ ಬೈಠ್ ಗಯೀ ? ಆವೋ ಖಾನ ಖಾವೋ, (ಮಗಳೆ ಏಳು ? ಏಕೆ ಹೀಗೆ ಕುಳಿತಿರುವೆ ? ಬಾ ಊಟಮಾಡು)

ಬೀಬಿ—ಮೈ ನಹಿ ಖಾತಿ, ಮುಝೇ ಖಾನ ನ ಚಾಹಿಯೇ, ಮುಝೆ ಭೂಖ್ ನಹೀ. (ನಾ ತಿನ್ನೊಲ್ಲ, ನನಗೆ ಊಟ ಬೇಡ, ನನಗೆ ಹಸಿವಿಲ್ಲ)

ಬಾದಷಾಹ—(ಹತ್ತಿರ ಬಂದು) ಕ್ಯೋಂ ಬೇಟಿ ? ಕ್ಯೋಂ ಖಾತಿ ನಹೀ ? ಉಠೋ ಖಾನ ಖಾವೋ. (ಏಕಮ್ಮ ಮಗು, ಯಾಕೆ ಊಟ ಮಾಡೋದಿಲ್ಲ ? ಏಳಮ್ಮ ಊಟ ಮಾಡು)

ಬೀಬಿ—(ಕೋಪ ಮತ್ತು ದುಃಖದಿಂದ ತಂದೆಯನ್ನು ನೋಡುವಳು.)

ಬೇಗಂ—ಐಸಾ ಬಿನ್ ಸೋಯೇ, ನ ಖಾಯೇ ರಹೇ ತೋ ತಬಿಯುತ್ ಕೊ ಕ್ಯಾ ಹೋಗ ? ಉಠೋ ಬೇಟಿ ಉಠೋ. (ಹೀಂಗೆ ಮಲಗ್ದೆ, ತಿನ್ದೆ ಇದ್ರೆ ಹೇಗೆ ? ಹುಷಾರ್ ತಪ್ಪುತ್ತೆ. ಏಳಮ್ಮ ಮಗು ಏಳು)

ಬೀಬಿ—ಮೈ ನಹೀ ಉಠ್‌ತೀ, ಮುಝೇ ಮೇರಾ ಗುಡ್ಡಿ ಲಾ ದೊ. (ನಾ ಏಳೋಲ್ಲ ನನಗೆ ನನ್ನ ಗೊಂಬೆ ಕೊಡು)

ಬಾದಷಾಹ—ಕೈಸೆ ಲಾವೂಂ ? ಉಸೆ ತೊ ವಹ್ ಬೊಮ್ಮನ್ ಲೇ ಗಯಾ. ಉಸ್ ಕಮರೇ ಮೆ ಬಹುತ್ ಸಾರೆ ಗುಡಿಯೇ ಪಡೇ ಹೈ. ಉನ್ಮೇ ಸೇ ಕೋಯಿ ಲೇಲೊ. (ಬೇಕಾದಷ್ಟು ಬೊಂಬೆಗಳಿವೆ. ಅದರಲ್ಲಿ ಯಾವುದು ಬೇಕೋ ತೆಗೆದುಕೊ)

ಬೀಬಿ—ಮುಝೇ ನಹೀ ಚಾಹಿಯೆ. ಮೇರೆ ಗುಡಿಯೆ ದೋ ನಹೀ ತೊ ಮೈ ಭೀ ಉಸ್ಕೆ ಪಾಸ್ ಜಾವೂಂಗಿ, ಮುಝೇ ಭೇಜ್ ದೊ. (ನನ್ಗೆ ಬೇಡ, ನನ್ನ ಬೊಂಬೆ ಕೊಡು. ಇಲ್ಲದಿದ್ದರೆ ನಾನೂ ಅವರ ಹತ್ತಿರ ಹೋಗ್ತೇನೆ. ನನ್ನ ಕಳ್ಸು)

ಬೇಗಂ—ಯಹ್ ಕ್ಯಾ ಹಠ್ ಕರ್ತೀ ಬೇಟೀ. ಛೋಡೋ ಹಠ್, ಉಸ್ಮೆ ಕ್ಯಾ ರಖಾ ಹೈ ? (ಇದೇನು ಹಠ ? ಬಿಡು ಹಠನ, ಅದರಲ್ಲಿ ಏನಿದೆ ?

ಬೀಬಿ—ನಹೀಮಾ ! ಮೈ ಯಹಾಂ ಔರ್ ಏಕ್ ಕ್ಷಣ್ ಭಿ ನರಹೂಂಗಿ. ಅಭೀ ಚಲೀ (ಎಂದು ಹೊರಡುವಳು)

(ಇಲ್ಲಾಮ್ಮ, ನಾನಿಲ್ಲ ಒಂದುಕ್ಷಣಾನೂ ಇರೋಲ್ಲ, ನಾ ಹೊರಟೆ)

ಬಾದಷಾಹ್—ಠಹರ್ ಬೇಟಿ ಠಹರ್ ; ಮೈ ತುಮ್ಹೆ ಭೇಜೂಂಗ, ತುಂ ತೈಯಾರ್ ಹೋಜಾ.

(ಇರಮ್ಮ ಇರು ನಾ ಕಳುಹಿಸುತ್ತೇನೆ, ನೀನು ಸಿದ್ಧಳಾಗು)

(ಬೇಗಂ ಆವಕ್ಕಾಗಿ ನೋಡುತ್ತಾ ನಿಲ್ಲುವಳು )

ಬಾದಷಾಹ—(ಬಂದು) ಚಲ್ ಬೇಟಿ ಚಲ್, ತುಮ್ಹಾರೆ ಜಾನೇ ಕಾ ಸಭೀ ಇಂತಜಾಮ್ ಕರ್ ದಿಯಾ ಹೈ, ತೂ ಮೇನಾಮೆ ಜಾಹ್. ತುಮ್ಹಾರೆ ಸಾಥ್ ಸೈನಿಕ್ ಭೀ ಆಯೇಂಗೆ (ನಡೀ ಮಗಳೆ ನಡಿ, ನೀನು ಹೋಗುವುದಕ್ಕೆ ಎಲ್ಲಾ ಏರ್ಪಾಡೂ ಆಗಿದೆ ನೀನು ಮೇನೆಯಲ್ಲಿ ಹೋಗು. ನಿನ್ನ ಜೊತೆ ಸೈನಿಕರೂ ಬರುವರು)

ಬೀಬಿ—(ತನ್ನನ್ನು ಚೆನ್ನಾಗಿ ಅಲಂಕರಿಸಿಕೊಂಡಿರುವಳು) ಅಬ್ಬಾ ಮೈ ಚಲಿ, ಆದಾಬ್, ಮಾ ಆದಾಬ್, ಖುದಾ ಹಾಫಿಸ್. (ಅಪ್ಪಾ ನಾ ಹೊರಟೆ, ಅಪ್ಪಾ ನಮಸ್ಕಾರ, ಅಮ್ಮಾ ನಮಸ್ಕಾರ)

(ಇಬ್ಬರೂ ಅವಳನ್ನೇ ನೋಡುತ್ತಾ ನಿಲ್ಲುವರು ಬೀಬಿ ಪಲ್ಲಕ್ಕಿಯಲ್ಲಿ ಕುಳಿತು ಕೊಳ್ಳುವಳು, ಪಲ್ಲಕ್ಕಿ ಹೊರಡುವುದು. ಧನಕನಕ ಹೊತ್ತ ಸಿಪಾಯಿಗಳೂ ಹೋಗುವರು. ಸ್ವಲ್ಪ ದೂರ ಹೋದ ಮೇಲೆ)

ಸಿಪಾಹಿ—ಮಾಯೀ, ಯಹಾಂ ಥೋಡಾ ಆರಾಂ ಕರೋ. (ತಾಯಿ, ಇಲ್ಲಿ ಸ್ವಲ್ಪ ವಿಶ್ರಮಿಸಿಕೊಳ್ಳಿ)

ಬೀಬಿ—ನಹೀ, ಅಭೀ ಜಲ್ದೀ ಜಾನಾ ಹೈ. ಉನ್ಕೆ ಪಾಸ್ ಪಹುಂಚ್ನಾ ಹೈ. (ಇಲ್ಲ, ಈಗ ಬೇಗ ಹೋಗೋಣ ಅವರಲ್ಲಿಗೆ ಹೋಗಬೇಕು)

ಸಿಪಾಹಿ—ಥೋಡಾ ಖಾನಾ ತೋ ಖಾ ಲೇ. (ಸ್ವಲ್ಪ ಊಟಾನಾದ್ರೂ ಮಾಡಿ)

ಬೀಬಿ—ಮುಝೆ ಖಾನಾ ಗೀನಾ ಕುಚ್ ನಹೀ ಚಾಹೀಯೆ. ಜಬ್ ತಕ್ ಮೇರೆ ಗುಡಿಯೇ ಕೆ ಪಾಸ್ ನ ಜಾಊಂಗೀ ತಬ್ ತಕ್ ನ ಖಾನ ಖಾಊಂಗೀ ನ ಸೋಊಂಗಿ ಜಲ್ದೀ ಜಲ್ದೀ ಚಲೋ. (ನನಗೆ ಊಟ ಉಡಿಗೆ ಏನೂ ಬೇಡ. ನನ್ನ ಗೊಂಬೆಯ ಬಳಿ ಹೋಗುವ ತನಕ ಊಟಾನೂ ಬೇಡ ನಿದ್ದೇನೂ ಬೇಡ, ಬೇಗ ಬೇಗ ನಡಿಯಿರಿ)

ಸಿಪಾಹಿ—ಅಚ್ಛಾ, ಹಮ್ ಜಲ್ದೀ ಜಲ್ದೀ ಚಲೇಂಗೆ (ಒಳ್ಳೇದು ನಾವು ಬೇಗ ಬೇಗ ಹೋಗುವೆವು)

(ಬೇಗ ಬೇಗ ಎಲ್ಲರೂ ಹೋಗುತ್ತಿರುವರು ಸ್ವಲ್ಪ ದೂರ ಹೋದ ಮೇಲೆ)

ಸಿಪಾಹಿ—ಮಾಯೀ, ಷಹಜಾದಿ ಸಾಬ್, ಹಮೇ ಬಹುತ್ ಪ್ಯಾಸ್ ಲಗೀ ಹೈ. ಕ್ಷಮಾಕರೋ ಹಮ್ ಥೋಡಾ ಪಾನಿ ಪೀಕೆ ಆಯೇಂಗೆ. (ತಾಯಿ, ರಾಜಕುಮಾರಿಯವರೇ ಕ್ಷಮಿಸಿ, ನಮಗೆ ಬಹಳ ಬಾಯಾರಿಕೆಯಾಗಿದೆ, ಸ್ವಲ್ಪ ನೀರು ಕುಡಿದು ಬರುತ್ತೇವೆ)

ಬೀಬಿ—ಅಚ್ಛಾ, ಜಲ್ದೀ ಆ ಜಾನ. (ಒಳ್ಳೇದು ಬೇಗ ಬನ್ನಿ)

ಸಿಪಾಹಿ—ಸಿಪಾಹಿ, ಮೇನಾ ಇಧರ್ ರಖೋ; ಆವೋ ಸಬ್ ಜಲ್ದೀ ಜಾ ಕೆ ಆ ಜಾಯೇಂಗೆ. ಷಹಜಾದಿ, ತುಮ್ ಮೇನಾ ಸೆ ಮತ್ ನಿಕಲೋ. ಅಂದರ್ ಹೀ ಬೈಠೇ ರಹೋ (ಸಿಪಾಯಿಗಳೇ. ಮೇನಾ ಇಲ್ಲಿಡಿ, ಬನ್ನಿ ಎಲ್ಲಾ ಬೇಗ ಹೋಗಿ ಬರೋಣ. ರಾಜಕುಮಾರಿ, ನೀವು ಮೇನೆಯಿಂದ ಇಳಿಯಬೇಡಿ. ಒಳಗೇ ಕುಳಿತಿರಿ)

ಬೀಬಿ—ಅಚ್ಛಾ, ಮೈ ಅಂದರ್ ಹೀ ಬೈಠೀ ರಹೂಂಗಿ. (ಒಳ್ಳೇದು, ನಾನು ಒಳಗೇ ಕುಳಿತಿರುವೆ)

(ಎಲ್ಲರೂ ಮೇನೆಯನ್ನು ಕೆಳಗೆ ಇಟ್ಟು ಹೋಗುವರು)

ಬೀಬಿ—(ತೆರೆಯನ್ನು ಸರಿಸಿ ನೋಡುವಳು. ತನ್ನಲ್ಲಿ ತಾನೆ) ಬಹುತ್ ಅಚ್ಛಾ ಹುವಾ, ಸಬ್ ಕೆ ಸಬ್ ಚಲೇ ಗಯೆ. ಯಹಾಂ ಕೋಯೀ ನಹೀ ಹೈ. ಇನ್ ಸೆ ಬಚ್‌ಕರ್ ನಿಕಲ್ನೇ ಕಾ ಯಹೀ ಅಚ್ಛಾ ಮೌಖಾ ಹೈ. ನಿಕಲ್‌ಕರ್ ಭಾಗೂಂಗಿ. ಮುಝೇ ಉನ್ಕೆ ಪಾಸ್ ಜಲ್ದೀ ಜಾನಾ ಹೈ. (ಬಹಳ ಒಳ್ಳೆಯದಾಯಿತು. ಎಲ್ಲರೂ ಹೊರಟು ಹೋದರು ಇಲ್ಲಿ ಯಾರೂ ಇಲ್ಲ. ಇವರಿಂದ ತಪ್ಪಿಸಿ ಕೊಂಡು ಓಡಬೇಕು ಇದೇ ಸರಿಯಾದ ಸಮಯ. ಬೇಗ ಓಡಿ ಹೋಗುವೆನು. ನಾನು ಅವರ ಹತ್ತಿರ ಬೇಗ ಹೋಗಬೇಕು.) (ಎಂದು ಓಡುವಳು.)

ಬೀಬಿ—(ಓಡುತ್ತಾ, ಓಡುತ್ತಾ) ಹಾಯ್, ಮೇರಾ ನಾಥ್! ಹೇ ಜಾನ್ ಕೆ ಪ್ಯಾರೆ! ಹೇ ಮೇರೆ ಖುದಾ! ತುಮ್ ಕಹಾಂ ಹೋ? ಮುಝೇ ಕ್ಯೋ ಛೋಡ್ಕೆ ಚಲಾ ಗಯಾ? (ಹುಡುಕುತ್ತಾ, ರೋಧಿಸುತ್ತಾ ಅಲೆದಾಡುವಳು.) (ಹಾ! ನನ್ನ ನಾಥ, ಎಲ್ಲೈ ನನ್ನ ಪ್ರಾಣವೆ! ಎಲ್ಲೈ ನನ್ನ ದೇವರೆ! ನೀ ಎಲ್ಲಿ ಹೋದೆ? ನನ್ನ ಬಿಟ್ಟು ಏಕೆ ಹೊರಟು ಹೋದೆ?)

(ರೋದಿಸುತ್ತಾ, ಹುಡುಕುತ್ತಾ ಓಡಿ ಬರುವಳು. ಒಂದು ನಿಮಿಷ ನಿಂತು) ಕಹಾಂ ಜಾಊಂ? ಕೈಸೆ ಜಾನಾ ಹೈ? ಊಂಚೇ ಊಂಚೇ ಪೇಡ್, ಏಕ್ ಸೇ ಏಕ್ ಸಟೇ ಹುಯೇ ಹೈ. ಕಹೀಂ ರಾಸ್ತಾ ಭಿ ನಹೀ ಹೈ. ಹೇ ಖುದಾ! ತೂ ಹೀ ದಿಖಾದೇನ? (ಕಣ್ಣು ಮುಚ್ಚಿ ನಿಲ್ಲುವಳು.)

ಕುಬೇರ—(ಬಂದು) ಇದೇನು! ಈ ದಟ್ಟವಾದ ಕಾಡಿನಲ್ಲಿ ಈ ಅನುಪಮ ಸುಂದರ ಮೂರ್ತಿ ಯಾರಿರಬಹುದು? ಇಷ್ಟು ಸುಂದರ ಯುವತಿ ಒಬ್ಬಳೇ ಈ ಗಾಡಾಂಧಕಾರದಲ್ಲಿ? ಈ ಕಾನನದಲ್ಲಿ? ಇರಲಿ, ವಿಚಾರಿಸುವೆನು. ಉಡಿಗೆ ತೊಡಿಗೆ ನೋಡಿದರೆ ರಾಜಕುಮಾರಿಯಂತಿದೆ. (ಜೋರಾಗಿ) ರಾಜಕುಮಾರಿ, ರಾಜಕುಮಾರಿ?

ಬೀಬಿ—(ಕಣ್ಣು ತೆರೆದು) ಕೌನ್? ಮೇರೆ ಗುಡಿಯೇ? ತುಂ ಆಗಯೇ? (ಯಾರು? ನನ್ನ ಗೊಂಬೆ? ನೀನು ಬಂದುಬಿಟ್ಟೆಯಾ?)

ಕುಬೇರ—ಕೌನ್ ? ಕೌನ್ ಸಾ ಗುಡಿಯಾ ? (ಯಾರು ? ಯಾವ ಬೊಂಬೆ ?)

ಬೀಬಿ—ವಹೀ, ವಹೀ ಮೇರೆ ಗುಡಿಯೇ ; ಉಸ್ನೆ ಲೇ ಲಿಯಾನ ? (ಅದೇ, ಅದೇ ನನ್ನ ಗೊಂಬೆ ಅವರು ಕೊಂಡು ಹೋದರಲ್ಲಾ ?)

ಕುಬೇರ—(ಸ್ವಲ್ಪ ಯೋಚಿಸಿ) ಅಚ್ಛಾ, ತುಮ್ಕೊ ವಹ್ ಗುಡಿಯಾ ಚಾಹಿಯೇ, ಚಲೋ ಮೈ ಲೇ ಚಲೂಂಗ ಉಸ್ಕೆ ಪಾಸ್ (ಒಳ್ಳೇದು, ನಿನಗೆ ಆ ಗೊಂಬೆ ಬೇಕೆ ; ನಡೀ ನಾ ಕರೆದೊಯ್ಯುವೆ ಅದರ ಬಳಿ)

ಬೀಬಿ—(ಹರ್ಷಚಿತ್ತಳಾಗಿ) ಬಹುತ್ ಅಚ್ಛಾ, ಚಲೋ. (ಒಳ್ಳೇದು, ನಡಿಯಿರಿ)

(ಇಬ್ಬರೂ ಸ್ವಲ್ಪ ದೂರ ಹೋಗುವರು. ಸ್ವಲ್ಪ ಹಣ್ಣನ್ನು ತೋರಿಸಿ)

ಕುಬೇರ—ಯಹ್ ಫಲ್ ಕೋ ಖಾ ಲೋ. (ಈ ಹಣ್ಣುಗಳನ್ನು ತೆಗೆದುಕೊ)

ಬೀಬಿ—ನಹೀ ನಹೀ, ಮುಝ್ಕೊ ನಹೀ ಚಾಹಿಯೆ. (ಬೇಡ ಬೇಡ, ನನಗೆ ಬೇಡವೇ ಬೇಡ)

ಕುಬೇರ—ಅಬೀ ಬಹುತ್ ದೂರ್ ಚಲ್ನಾ ಹೈ ಬೀಚ್ ಮೇ ತುಮ್ ಥಕ್ ಜಾವೋಗಿ ತೋ ? (ಇನ್ನೂ ಬಹಳ ದೂರ ಹೋಗಬೇಕು ಮಧ್ಯೆ ನೀ ಧಣಿದು ಹೋದರೆ ?)

ಬೀಬಿ—ಅಚ್ಛಾ, ಏಕ್ ದೋ ದೀಜೀಯೆ. (ಒಳ್ಳೇದು ಒಂದೆರಡು ಕೊಡಿ)

(ಕುಬೇರ ಒಂದೆರಡು ಹಣ್ಣುಗಳನ್ನು ಕೊಡುವನು. ಬೀಬಿ ತಿನ್ನುವಳು) ಬಸ್, ಅಬ್ ಚಲೀಯೆ ಜಾಯೆಂಗೆ. (ನಡಿಯಿರಿ ಈಗ ಹೋಗುವ)

ಕುಬೇರ—ಅಬ್ ಕೈಸೆ ಜಾವೋಗಿ ? ಘನಾ ಅಂಧಕಾರ್ ಹೈ, ಘನಾ ಜಂಗಲ್ ಹೈ, ರಾಸ್ತಾ ಭೀ ದಿಖಾಯಿ ನಹೀ ದೇತಾ. ಥೋಡೀ ದೇರ್ ಸೋ ಜಾವೊ. ಸುಬಹ್ ಸೂರಜ್ ನಿಕಲ್ನೇ ಕೆ ಬಾದ್ ಜಾಯೆಂಗೆ (ಈಗ ಹೇಗೆ ಹೋಗುವೆ ? ಘನಾಂದಕಾರ, ದಟ್ಟವಾದ ಕಾಡು, ರಸ್ತೆಯೂ ಕಾಣುತ್ತಿಲ್ಲ. ಸ್ವಲ್ಪ ಹೊತ್ತು ಮಲಗು ಬೆಳಗ್ಗೆ ಸೂರ್ಯ ಹುಟ್ಟಿದ ನಂತರ ಹೋಗೋಣ)

ಬೀಬಿ—ಯಹ್ ಕೈಸೆ ಹೋಗಾ ? ಸೋಗಯೀ ತೊ ಜಾನ ಕೈಸೆ ? ದೇರ್ ಲಗೇಗೀನ ? (ಅದು ಹೇಗೆ ಸಾಧ್ಯ ? ಮಲಗಿದರೆ ಹೋಗುವುದು ಹೇಗೆ ? ಹೊತ್ತಾಗುವುದಲ್ಲವೆ ?)

ಕುಬೇರ—ಅಬ್ ರಾಸ್ತಾ ಹೀ ನಹೀ ದೀಖ್ತಾ ! ಆಗೆ ಜಾ ನಹೀ ಸಕ್ತೆ, ಅಬ್ ಸೋನಾ ಹೀ ಪಡೇಗ (ಈಗ ರಸ್ತೆಯೇ ಕಾಣುವುದಿಲ್ಲ ! ಮುಂದೆ ಹೋಗಲಾರೆವು ; ಈಗ ಮಲಗಲೇ ಬೇಕು)

ಬೀಬಿ—ಆಪ್ ಇತನಾ ಕಹೇಂಗೆ ತೊ ಮುಝೆ ಸೋನಾ ಹೀ ಪಡೇಗ ಅಚ್ಛಾ ಸೋ ಜಾ ಊಂಗಿ. (ತಾವು ಇಷ್ಟು ಹೇಳಿದರೆ ನಾನು ಮಲಗಲೇಬೇಕು. ಒಳ್ಳೇದು ಮಲಗುವೆನು ) (ಮಲಗುವಳು)

ಕುಬೇರ—(ಅವಳನ್ನೇ ನೋಡುತ್ತಾ) ಪಾಪ ಎಷ್ಟು ದಣಿದಿರುವಳು. ಮುಖವೆಲ್ಲಾ ಎಷ್ಟು ಬಾಡಿರುವುದು ? ಆ ಗೊಂಬೆಗಾಗಿ. ಆ ನನ್ನ ಮುದ್ದು ಶೆಲ್ವನಿಗಾಗಿ ! ಇವಳ ಭಕ್ತಿಯನ್ನು ಸ್ವಲ್ಪ ಪರೀಕ್ಷಿಸಿ ನೋಡುವೆನು. (ಮುಟ್ಟುವನು)

ಬೀಬಿ—(ಬೆಚ್ಚಿ ಎದ್ದು) ಏ ಕೌನ್ ? ಹಟ್ ಜಾ ಕೌನ್ ಮುಝೇ ಛೂ ರಹಾ ಹೈ ? ಮೈ ಉಸ್ ಗುಡಿಯೇ ಕಿ ಬೀಬಿ ಹೂಂ ಜಾವೋ ಚಲೇ ಜಾವೋ (ಏ ಯಾರು ? ದೂರ ಸರಿ ಯಾರು ನನ್ನ ಮುಟ್ಟುವವರು ? ನಾನು ಆ ಗೊಂಬೆಯ ಹೆಂಡತಿ. ಹೋಗು ಹೊರಟುಹೋಗು ಇಲ್ಲಿಂದ)

ಕುಬೇರ—(ದೂರ ಸರಿದು) ಬೀಬೀ ಕ್ಯೋ ಐಸೀ ಬಾತ್ ಕರ್ತೀ ಹೈ ? ಸೋ ಜಾವೋ. ಕೋಯಿ ನಹೀ ಆಯೆ. ಅಭೀ ಸೂರಜ್ ನಹೀ ನಿಕಲಾ. (ಬೀಬಿ ಏಕೆ ಹೀಗೆ ಮಾತಾಡುವೆ ? ಮಲಗು ಇಲ್ಲಿ ಯಾರೂ ಬಂದಿಲ್ಲ. ಇನ್ನೂ ಸೂರ್ಯ ಹುಟ್ಟಿಲ್ಲ, ನಿಜಕ್ಕೂ ಇವಳು ಭಕ್ತಳೇ ಸರಿ)

(ಬೀಬಿ ಮಲಗುವಳು. ಕುಬೇರನೂ ಒಂದೆಡೆ ಮಲಗುವನು. ಸೂರ್ಯನ ಹೊಂಗಿರಣ ಇಬ್ಬರ ಮೇಲೂ ಬೀಳುವುದು, ಕುಬೇರ ಗಡಿಬಿಡಿಯಿಂದ ಏಳುವನು)

ಕುಬೇರ—ಬೀಬಿ, ಉಠೋ ಸುಬಹ್ ಹೋಗಯಾ ! ಹಮೇ ಜಾನಾ ಹೈ. (ಬೀಬಿ ಏಳು ಬೆಳಗಾಯಿತು. ನಾವು ಹೋಗಬೇಕು)

ಬೀಬಿ—(ಕಣ್ಣುಜ್ಜಿಕೊಳ್ಳುತ್ತಾ ಎದ್ದು) ಚಲೋ ಹಮ್ ಜಾಯೆಂಗೆ ದೇರ್ ಹೋ ರಹೀ ಹೈ (ನಡೀ ನಾವು ಹೋಗುವ ಹೊತ್ತಾಗುತ್ತೆ)

ಕುಬೇರ—ಚಲೋ ಜಾಯೇಂಗೆ (ನಡೀ ಹೋಗೋಣ)

(ಇಬ್ಬರೂ ಹೋಗುವರು)

(ತೆರೆ ಬೀಳುವುದು)

## ದೃಶ್ಯ—೪

[ಅದೇ ಕಾಡು. ಕೆಲವು ಸೈನಿಕರು ಬರುವರು. ಇಬ್ಬರು ಪಲ್ಲಕ್ಕಿಯನ್ನು ಹೊತ್ತು ಬರುವರು.]

ಒಬ್ಬ ಸಿಪಾಯಿ—ಯಹ್ ಕ್ಯಾ ? ಮೇನಾ ಹಲ್ಕಾ ಹೋಗಯಾ ! (ಇದೇನು ? ಮೇನೆ ಹಗುರವಾಗಿದೆ !)

ಮತ್ತೊಬ್ಬ ಸಿಪಾಯಿ—ಮುಝೇ ಭೀ ಐಸಾ ಹೀ ದೀಖ್ತಾ ಹೈ ! (ನನಗೂ ಹಾಗೇ ಕಾಣುತ್ತೆ !)

ಒಬ್ಬ ಸಿಪಾಯಿ—ಠಹರೋ, ಸೇನಾಪತಿ ಕೆ ಪಾಸ್ ಜಾಕೆ ಬೋಲ್ತಾ ಹೂಂ. (ಇರು, ಸರದಾರನಿಗೆ ಹೋಗಿ ಹೇಳುವೆ) (ಮೇನೆ ಕೆಳಗಿಟ್ಟು ಸರದಾರನ ಹತ್ತಿರ ಹೋಗುವನು)

ಮತ್ತೊಬ್ಬ ಸಿಪಾಯಿ—ಸಾಬ್, ಸಾಬ್ ಮೇನಾ ಹಲ್ಕಾ ಹೈ! ಆಇಯೆ, ದೇಖಿಏನಾ ? (ಸಾಹೇಬರೇ, ಮೇನೆ ಹಗುರವಾಗಿದೆ! ಬನ್ನಿ ಬಂದು ನೋಡಿ)

ಸರದಾರ್—ಕ್ಯಾ! ಕ್ಯಾ! ಕ್ಯಾ ಬೋಲ್ ರಹಾ ಹೈ ? ಮೇನಾ ಹಲ್ಕಾ ಹೋಗಯಾ ? ಚಲೋ ದೇಖೇಂಗೆ (ಏನು ಏನು! ಏನು ಹೇಳಿದೆ ? ಮೇನಾ ಹಗುರವಾಗಿದೆಯು ? ನಡಿ ಹೋಗಿ ನೋಡೋಣ)

(ಸರದಾರ ಮತ್ತು ಸಿಪಾಯಿ ಪಲ್ಲಕ್ಕಿಯ ಬಳಿ ಬರುವರು. ಸರದಾರನು ಮೇನೆಯ ತೆರೆಯನ್ನು ಸರಿಸಿ ನೋಡುವನು ಅಲ್ಲಿ ಬೀಬಿ ಇರುವುದಿಲ್ಲ)

ಸರದಾರ್—ಯಹ್ ಕ್ಯಾ! ಷಹಜಾದಿ ನಹೀ ಹೈ ? ಕಹಾಂ ಗಯೀ ? ಆಪ್ ಸಬ್ ಕ್ಯಾ ಕರ್ ರಹೇ ಥೆ ? ಕೌನ್ ಲೇಕೆ ಗಯೆ ? (ಇದೇನು! ಷಹಜಾದಿ ಇಲ್ಲವೇ ಇಲ್ಲ ? ಎಲ್ಲಿ ಹೋದಳು ? ನೀವೆಲ್ಲಾ ಏನು ಮಾಡುತ್ತಿದ್ದಿರಿ ? ಯಾರು ತೆಗೆದುಕೊಂಡು ಹೋದರು ?)

ಎಲ್ಲರೂ—ಯಹೀಂ ಥೆ. (ಇಲ್ಲೇ ಇದ್ದೆವು)

ಸರದಾರ್—ಯಹೀಂ ಥೆ ? ಸೋ ಕೈಸೆ ಗಯಿ ? ಯಹಾಂ ನಹೀ ಹೈ ನ ? (ಇಲ್ಲೇ ಇದ್ದಿರೆ ? ಆದರೆ ಹೇಗೆ ಹೋದಳು ? ಇಲ್ಲಿಲ್ಲವಲ್ಲಾ ?)

ಎಲ್ಲರೂ—ಮೇನಾ ರಖೆ ಥೋಡಾ ಪಾನೀ ಪೀನೆ ಗಯೇ ಥೆ. (ಮೇನಾ ಇಟ್ಟು ನೀರು ಕುಡಿಯಲು ಹೋಗಿದ್ದೆವು)

ಸರದಾರ್—ಕಿಸೀ ಕೋ ರಖ್ನೇ ಜಾನಾ ಥಾ ? ಕ್ಯೋ ಸಬ್ ಗಯೇ ? (ಯಾರಾದರೂ ಇರಬೇಕಾಗಿತ್ತು ? ಯಾಕೆ ಎಲ್ಲಾ ಹೋದಿರಿ ?)

ಒಬ್ಬ ಸಿಪಾಯಿ—ಷಹಜಾದಿ ಕೋ ಹೋಷಿಯಾರ್ ರಹನೆ ಬೋಲ್ಕೆ ಗಯೇ ಥೆ. (ಷಹಜಾದಿಯನ್ನು ಎಚ್ಚರದಿಂದಿರೆಂದು ಹೇಳಿ ಹೋದೆವು)

ಸರದಾರ್—ಅಬ್ ನಹೀ ಹೈನ ? ಕ್ಯಾ ಕರೇಂಗೆ ? ಚಲೋ ಸಬ್ ಉಸ್ಕೊ ಢೂಂಡೇಂಗೆ ನ ಜಾನೆ ಕೌನ್ ಲೇ ಗಯಾ ? (ಈಗಿಲ್ಲವಲ್ಲಾ ? ಏನು ಮಾಡುವುದು ? ನಡಿಯಿರಿ ಎಲ್ಲಾ ಅವಳನ್ನು ಹುಡುಕುವ. ಯಾರು ಹೊತ್ತುಕೊಂಡು ಹೋದರೋ ಏನೋ ?)

(ಎಲ್ಲರೂ ಹುಡುಕುತ್ತಾ ಹೋಗುವರು ಈ ಕಡೆಯಿಂದ ರಾಮಾನುಜರೂ ಅವರ ಶಿಷ್ಯರೂ ಬರುವರು )

ರಾಮಾನುಜ—ಇನ್ನೂ ಈ ಗೊಂಡಾರಣ್ಯವನ್ನು ದಾಟಲಿಲ್ಲವಲ್ಲಾ ? ದಾಶರಥಿ ನೋಡು ಕಾಡಿನ ಗಿಡಮರಗಳು ಎಷ್ಟೆಷ್ಟು ಎತ್ತರ ಬೆಳೆದಿರುವುದು !

ಒಂದಕ್ಕೊಂದಕ್ಕೆ ಹೇಗೆ ಅಂಟಿಕೊಂಡಿರುವುದು ? ಎಲ್ಲೂ ಚಂದ್ರ ರಶ್ಮಿಯಾಗಲೀ, ಸೂರ್ಯ ರಶ್ಮಿಯಾಗಲೀ ಕಾಣಲವಕಾಶವೇ ಇಲ್ಲ! ಬಳ್ಳಿಗಳು ಮರಗಳನ್ನು ಅಲುಂಗಿಸಿ ಇನ್ನೂ ಕತ್ತಲೆಯನ್ನು ಹೆಚ್ಚಿಸುತ್ತಿವೆ !

ದಾಶರಥಿ—ಅಲ್ಲಲ್ಲಿ ಕಾಡುಗಳ ಮಧ್ಯೆ ಹರಿಯುವ ಝುರಿಗಳ ಜುಳ ಜುಳ ಶಬ್ದವು ಕೇಳಿ ಬರುತ್ತಿದೆ ಬೊಂಬುಗಳ ಚಟ ಚಟ ಸಿಡಿತ, ಜೀರುಂಡೆಗಳ ಝೀಂಕಾರ ಹೇಗೆ ಕೇಳಿಬರುತ್ತಿದೆ !

ರಾಮಾನುಜ—ಅಲ್ಲಿ ಕೇಳಿದೆಯಾ, ನರಿಗಳ ಕೂಗು, ಆನೆಗಳ ಘೀಂಕಾರ, ಸಿಂಹಗಳ ಘರ್ಜನೆ ಕೇಳಿ ಬರುತ್ತಿವೆ. ನಾವು ಆದಷ್ಟು ಬೇಗ ಈ ಕಾಡಿನಿಂದ ತಪ್ಪಿಸಿಕೊಂಡು ಹೋಗಬೇಕು.

ದಾಶರಥಿ—ಹೌದು ಗುರುಗಳೇ, ಬೇಗ ಹೋಗಬೇಕು. ಸಿಂಹ ಘರ್ಜನೆ ಕೇಳಿಬರುತ್ತಿದೆ. ನಾವು ಬೇಗ ಹೋಗೋಣ

ರಾಮಾನುಜ—ಭಾಗವತರುಗಳೇ, ಬನ್ನಿ ಬನ್ನಿ ಎಲ್ಲಾ ಒಂದಾಗಿ ಬನ್ನಿ, ಕ್ರೂರ ಮೃಗಗಳ ಘರ್ಜನೆ ಕೇಳುತ್ತಿರುವುದು : ನಾವೆಲ್ಲಾ ಬೇಗ ಹೋಗುವ.

ಎಲ್ಲರೂ—(ಬಂದು) ಬಂದೆವು ಗುರುಗಳೇ, ಬೇಗ ಬೇಗ ಹೋಗುವ. (ಎಲ್ಲರೂ ಬೇಗ ಬೇಗ ಹೋಗುತ್ತಿರುವರು)

ದಾಶರಥಿ—ಗುರುಗಳೇ, ಹಿಂದೆ ಏನೋ ಭಾರಿ ಗದ್ದಲವು ಕೇಳುತ್ತಿರುವುದು. ಯಾರೋ ಬರುತ್ತಿರುವ ಹಾಗೆ ಇದೆ.

ರಾಮಾನುಜ—ಹೌದು, ಭಾರಿ ಗದ್ದಲ ಕೇಳುತ್ತಿರುವುದು. ಷಹಜಾದಿಯ ಸೈನಿಕರೇ ಬಂದರೇನೋ ? ಬೇಗ ಬೇಗ ನಡೆಯಿರಿ, ಹೋಗೋಣ. (ಎಲ್ಲರೂ ಬೇಗ ಬೇಗ ಹೋಗುವರು)

(ಎಲ್ಲರೂ ಪುನಃ ರಂಗಮಂಟದ ಮೇಲೆ ಬೇಗ ಬೇಗ ಬರುವರು.)

ದಾಶರಥಿ—ಆಚಾರ್ಯರೇ, ಆಚಾರ್ಯರೇ, ಆ ಗುಂಪು ಹತ್ತಿರ ಹತ್ತಿರ ಬರುವಂತೆ ಕಾಣುತ್ತಿರುವುದು.

ರಾಮಾನುಜ—ಯಾರಿರಬಹುದು ?

ಒಬ್ಬ ಭಾಗವತ—ಆಚಾರ್ಯರೆ, ಕಳ್ಳರ ಗುಂಪಿನ ಹಾಗೆ ಕಾಣುತ್ತಿರುವುದು.

ರಾಮಾನುಜ—ನಮ್ಮ ಶೆಲ್ವನನ್ನು ಮತ್ತೆ ಪಡೆಯಲು ಬಾದಷಾಹನೇ ಕಳುಹಿಸಿರುವನೋ ಏನೋ ?

ದಾಶರಥಿ—ಬೇಗ ಬನ್ನಿ, ಅಲ್ಲಿ ಒಂದು ಬಸ್ತಿಯು ಕಾಣುತ್ತಿರುವುದು ಅಲ್ಲಾದರೂ ಹೋಗುವ,

ರಾಮಾನುಜ—ನಡೆಯಿರಿ, ಬೇಗ ಹೋಗೋಣ.

(ಎಲ್ಲರೂ ಬೇಗ ಬೇಗ ಹೋಗುವರು ಅಷ್ಟರಲ್ಲಿ ಕಳ್ಳರ ಗುಂಪು ಬಂದು ಇವರನ್ನು ಮುತ್ತುವುದು. ಆಚಾರ್ಯರು ರಾಮಪ್ರಿಯನನ್ನು ಬಹಳ ಜೋಪಾನ ವಾಗಿ ಮುಚ್ಚಿಡಲು ಪ್ರಯತ್ನಿಸುವರು. ಎಲ್ಲರೂ 'ರಕ್ಷಿಸಿ, ರಕ್ಷಿಸಿ', ಎಂದು ಜೋರಾಗಿ ಕಿರುಚಿಕೊಳ್ಳುವರು ಎಲ್ಲಿಂದಲೋ ಒಂದು ಗುಂಪು ಜನರು ಬರುವರು.)

ಜನರ ಗುಂಪು—ಬಿಡಿ ಅವರನ್ನು ಇಲ್ಲದಿದ್ದರೆ ನಿಮ್ಮ ಪ್ರಾಣಕ್ಕೆ ಅಪಾಯವಾಗುವುದು.

ಕಳ್ಳರ ಒಡೆಯ —ಬಿಡುವುದಿಲ್ಲ. ನಮಗೆ ಆ ವಿಗ್ರಹ ಬೇಕು

ಗುಂಪಿನ ಒಡೆಯ—ಬಿಡುವುದಿಲ್ಲವೇ ?

ಕಳ್ಳರ ಒಡೆಯ—ಇಲ್ಲ ಬಿಡುವುದಿಲ್ಲ. (ಎಂದು ಆಚಾರ್ಯರಿಂದ ವಿಗ್ರಹ ಕಿತ್ತು ಕೊಳ್ಳುವನು,)

ಗುಂಪಿನ ಒಡೆಯ—ಹಾಗಾದರೆ ತಾಳ್ಳಿ, ನಿಮಗೆ ಮಾಡುವೆವು

(ಎಲ್ಲರೂ ಹೊಡೆದಾಡುವರು ಜಗಳವಾಡಿ ಕಳ್ಳರ ಕೈಯಿಂದ ರಾಮಪ್ರಿಯನನ್ನು ಕಿತ್ತುಕೊಂಡು ಕಳ್ಳರನ್ನು ಹೊಡೆದೋಡಿಸುವರು )

ಗುಂಪಿನ ಒಡೆಯ—ಮಹಾಸ್ವಾಮಿ, ತೆಗೆದುಕೊಳ್ಳಿ ಈ ವಿಗ್ರಹವನ್ನು (ಆಚಾರ್ಯರ ಕೈಗೆ ಕೊಡುವನು)

ರಾಮಾನುಜ—ಬಹಳ ಸಂತೋಷದಿಂದ ರಾಮಪ್ರಿಯನನ್ನು ತಬ್ಬಿಕೊಂಡು (ಆನಂದ ಭಾಷ್ಪ ಸುರಿಸುವರು) ನೀವು ನಮಗೆ ಬಹಳ ಸಹಾಯಮಾಡಿದಿರಿ. ನಿಮಗೆ ಒಳ್ಳೆಯದಾಗಲಿ ನಾವಿನ್ನು ಬರುತ್ತೇವೆ.

ಗುಂಪಿನ ಒಡೆಯ—ಸ್ವಾಮಿ, ತಾವು ಈ ನಡುಗತ್ತಲಲ್ಲಿ ಎಲ್ಲಿ ಹೋಗುತ್ತಿರುವಿರಿ ? ನಮ್ಮಲ್ಲಿ ಈ ರಾತ್ರಿ ತಂಗಿ ನಾಳೆ ಹೋಗಬಹುದಲ್ಲಾ ?

ರಾಮಾನುಜ—ನಾವು ಯಾದವಾದ್ರಿಗೆ ಹೋಗುತ್ತಿದ್ದೇವೆ ಅಲ್ಲಿ ಈ ವಿಗ್ರಹವನ್ನು ಪ್ರತಿಷ್ಠಿಸಬೇಕು. ಆದಕ್ಕೆ ಬೇಗ ಹೋಗಬೇಕು ತಾವು ಬಹಳ ಉಪಕಾರ ಮಾಡಿದಿರಿ. ತಾವು ಯಾರೆಂದು ಗೊತ್ತಾಗಲಿಲ್ಲ ?

ಗುಂಪಿನ ಒಡೆಯ—ನಾವು ಹೊಲೆಯರು, ನಮ್ಮ ಬಸ್ತಿಯು ಇಲ್ಲೇ ಇರುವುದು, ತಾವು ತಂಗಬಹುದಲ್ಲಾ ?

ರಾಮಾನುಜ—ಏನು ನೀವು ಹೊಲೆಯರೆ ? ಆಶ್ಚರ್ಯ ! ನಿಮ್ಮಲ್ಲಿ ಎಂತಹ ಸೌಹಾರ್ದವಿರುವುದು ! ಕಷ್ಟದಲ್ಲಿ ಸಿಕ್ಕ ನಮಗೆ ಎಷ್ಟೊಂದು ಸಹಾಯ ಮಾಡಿದಿರಿ ! ನಿಮ್ಮ ಮಾನವೀಯ ಗುಣವು ಮೆಚ್ಚತಕ್ಕದ್ದೆ ಇಂತಹ ಶ್ರೇಷ್ಠ ಗುಣವನ್ನು ಪಡೆದಿರುವಿರಿ. ಶ್ರೇಷ್ಠ ಗುಣವನ್ನು ಪಡೆದ ನೀವು ಹೊಲೆಯರಲ್ಲ, "ತಿರುಕುಲತ್ತಾರ್",

ಗುಂಪಿನ ಒಡೆಯ—ಆಚಾರ್ಯರೆ ತಿರುಕುಲತ್ತಾರ್ ಎಂದರೆ ಏನು ?

ರಾಮಾನುಜ—ಶ್ರೇಷ್ಠ ಗುಣವನ್ನು ಪಡೆದಿರುವವರು ಎಂದು.

ಗುಂಪಿನ ಒಡೆಯ—ಆಚಾರ್ಯರೆ ತಮ್ಮ ಉದಾರತೆಗೆ ನಾವು ಚಿರಸ್ಮರಣೀಯರು, ನಾವು ಕೃತಕೃತ್ಯರಾದೆವು. ತಾವು ಯಾರೆಂದು ಗೊತ್ತಾಗಲಿಲ್ಲವಲ್ಲಾ ?

ದಾಶರಥಿ—ಇವರೇ ಜಗತ್ಪ್ರಸಿದ್ಧರಾದ ರಾಮಾನುಜರು.

ಎಲ್ಲರೂ—(ಆಶ್ಚರ್ಯದಿಂದ ನೋಡಿ, ದಿಢೀರನೆ ಎಲ್ಲರೂ ರಾಮಾನುಜರ ಪಾದದಲ್ಲಿ ಬೀಳುವರು) ಸ್ವಾಮಿ ನನ್ನನ್ನು ರಕ್ಷಿಸಿ, ದೀಕ್ಷೆ ದಯಪಾಲಿಸಿ.

ರಾಮಾನುಜ—ತಮ್ಮಗಳನ್ನು ಆ ಭಗವಂತನು ಕಾಪಾಡಲಿ. ತಾವೆಲ್ಲಾ ಶ್ರೀಮನ್ ನಾರಾಯಣನ ಅನುಗ್ರಹ ಪಡೆಯುವರಾಗಿ ನಮ್ಮ ಶೆಲ್ವನ ಉತ್ಸವ ಕಾಲದಲ್ಲಿ ತಮ್ಮಗಳಿಂದ ಒಂದು ದಿನದ ಪೂಜೆ ಸಲ್ಲಲಿ ತಮ್ಮಿಂದಲ್ಲವೆ ಶೆಲ್ವನು ದೊರೆತುದು ಅವನ ಕೃಪಾ ಕಟಾಕ್ಷವು ತಮ್ಮಗಳಿಗಿರಲಿ. ನಮಗೆ ವೇಳೆಯಾಗುತ್ತಿದೆ. ನಾವಿನ್ನು ಹೊರಡುತ್ತೇವೆ.

ಗುಂಪಿನ ಒಡೆಯ—(ನಮಸ್ಕರಿಸಿ) ಚೆನ್ನ, ರಾಮ, ನೀವು ಇವರನ್ನು ಸುರಕ್ಷಿತವಾಗಿ ಊರು ಸೇರಿಸಿ ಬನ್ನಿ.

ಚೆನ್ನ, ರಾಮ—ಆಗಲಿ ಒಡೆಯ, ಬನ್ನಿ ಸ್ವಾಮಿ ಹೋಗೋಣ.

ರಾಮಾನುಜ—ಭಾಗವತರುಗಳೇ, ದಾಶರಥಿಗಳೇ ಹೊರಡಿ. ಎಲ್ಲಾ ಹೋಗೋಣ. (ಎಲ್ಲರೂ ಹೋಗುವರು.)

(ತೆರೆ ಬೀಳುವುದು)

## ದೃಶ್ಯ—೫

[ಯಾದವಾದ್ರಿಯ ಮುಖ್ಯ ಬೀದಿ. ವಿಶಾಲವಾದ ಬೀದಿ. ಎರಡೂ ಕಡೆಯೂ ಭಾಗವತರ ಮನೆಗಳೂ, ಅಂಗಡಿ ಸಾಲುಗಳೂ, ಅಂದವಾಗಿ ಸಿಂಗರಿಸಿರುವುದು. ಬೀದಿ ಎಲ್ಲಾ ತಳಿರು ತೋರಣಗಳಿಂದ ಶೋಭಿಸುತ್ತಿರುವುದು. ಸುಹಾಸಿನಿಯರು ಅಂದವಾದ ರಂಗವಲ್ಲಿಯಿಂದ ಬೀದಿಯನ್ನು ಅಲಂಕರಿಸಿ ಮಂಗಳ ದ್ರವ್ಯಗಳನ್ನು ಹಿಡಿದು ಶೆಲ್ವನನ್ನು ಸ್ವಾಗತಿಸುತ್ತಿರುವರು. ತಾಳ ಮೇಳ ವಾದ್ಯಗಳು ಮುಂದೆ ಸಾಗುತ್ತಿರುವುದು. ವೇದ ಘೋಷ ಮಾಡುತ್ತಾ ವಿಪ್ರರೂ, ಭಾಗವತರೂ ಮುಂದೆ ಸಾಗುತ್ತಿರುವರು, ರಾಮಾನುಜರೂ ಪಲ್ಲಕ್ಕಿಯ ಮುಂದೆ ಬರುತ್ತಿರುವರು ಪಲ್ಲಕ್ಕಿಯಲ್ಲಿ ಅಂದವಾಗಿ ಅಲಂಕರಿಸಿದ ಶೆಲ್ವನಾರಾಯಣನ ಮೂರ್ತಿಯು ರಾರಾಜಿಸುತ್ತಿರುವುದು. ಉತ್ಸವವು ಮುಂದೆ ಸಾಗುತ್ತಿರುವುದು ಹಿಂದೆ 'ತಿರುಕುಲತ್ತಾರ್'ಗಳು ಭಗವಂತನ ನಾಮಸ್ಮರಣೆ ಮಾಡುತ್ತಾ, ಭಜನೆಮಾಡುತ್ತಾ ಬರುತ್ತಿರುವರು. ಬೀಬಿ ಓಡೋಡಿ ಬರುವಳು. ಅವಳ ಹಿಂದೆ ಕುಬೇರನೂ ಬರುವನು.)

ಬೀಬಿ—ಹೇ ಮೇರೆ ಶೌಹರ್ ! ಮೇರೆ ಜಾನ್ ! ತುಂ ಕಹಾಂ ಗಯೇ ! ಮುಝೇ ಛೋಡ್ಕೆ ಕಹಾಂ ಭಾಗೆ ? ಮುಝೇ ಭಿ ಆಪ್ನೆ ಪಾಸ್ ಲೇಲೋ . ಮೈ ಭೀ ತುಮ್ಹಾರೆ ಸಾಥ್ ಆಊಂಗಿ (ಎಲೈ ನನ್ನ ದೇವನೆ! ನನ್ನ ಪ್ರಾಣವೆ ! ನೀನೆಲ್ಲಿ ಹೋದೆ ? ನನ್ನ ಬಿಟ್ಟು ಎಲ್ಲಿ ಓಡಿದೆ ? ನನ್ನನ್ನು ನಿನ್ನ ಬಳಿ ಕರೆದುಕೊ : ನಾನೂ ನಿನ್ನ ಬಳಿ ಬರುವೆನು.)

ಒಬ್ಬ ಭಾಗವತ—ಆಚಾರ್ಯರೇ, ಆಚಾರ್ಯರೇ ! ಹಿಂದೆ ನೋಡಿ.

ರಾಮಾನುಜ—(ಹಿಂದೆ ನೋಡಿ) ಓ ಬೀಬಿ ಬರುತ್ತಿರುವಳು !

ದಾಶರಥಿ—ಹೇಗೆ ಓಡೋಡಿ ಬರುತ್ತಿರುವಳು !

ರಾಮಾನುಜ—ಶೆಲ್ವನನ್ನು ಕಾಣಲು ಕಾತರಳಾಗಿ ಬರುತ್ತಿರುವಳು ದಾಶರಥಿಗಳೇ ಅವಳ ಭಕ್ತಿಯನ್ನು ನೋಡಿದಿರಾ ?

ದಾಶರಥಿ—ನಿಜವಾಗಿಯೂ ಮೆಚ್ಚತಕ್ಕದ್ದು

ಬೀಬಿ—(ಓಡೋಡಿ ಬಂದು ರಾಮಾನುಜರ ಪಾದಗಳಿಗೆ ನಮಸ್ಕರಿಸಿ) ಸ್ವಾಮೀಜೀ, ಸ್ವಾಮೀಜೀ, ಮುಝೇ ಭೀ ಶೆಲ್ವ ಕೆ ಪಾಸ್ ಲೇ ಚಲೀಯೆ. ಮೈ ಉಸೆ ಛೋಡ್ಕೆ ಏಕ್ ಕ್ಷಣ್ ಭೀ ನಹೀ ರಹ್ ಸಕ್ತಿ. ಕಹಾಂ ಹೈ ಮೇರಾ ಶೆಲ್ವ ? (ಸ್ವಾಮಿಗಳೇ, ನನ್ನನ್ನು ಶೆಲ್ವನ ಹತ್ತಿರ ಕರೆದುಕೊಂಡು ಹೋಗಿ ನಾನು ಅವನನ್ನು ಬಿಟ್ಟು ಒಂದು ಕ್ಷಣವೂ ಇರಲಾರೆ. ಎಲ್ಲಿ ನನ್ನ ಶೆಲ್ವ ?)

ರಾಮಾನುಜ—ನೋಡಮ್ಮ, ಅಲ್ಲಿ ಪಲ್ಲಕ್ಕಿಯಲ್ಲಿರುವನು. ಬೋಯಿಗಳೇ ಪಲ್ಲಕ್ಕಿಯನ್ನು ಇಳಿಸಿ. (ಬೋಯಿಗಳು ಪಲ್ಲಕ್ಕಿಯನ್ನು ಇಳಿಸುವರು ಬೀಬಿಯು ಶೆಲ್ವನನ್ನು ನೋಡುತ್ತಾ ಕೈ ಮುಗಿದು ನಿಲ್ಲುವಳು )

ದಾಶರಥಿ—(ಹತ್ತಿರ ಬಂದು) ಬೀಬಿ ಈಗ ಶೆಲ್ವನು ದೇವಸ್ಥಾನದ ಒಳಗೆ ಬರುವನು. ನಿನ್ನನ್ನು ಈ ಬ್ರಾಹ್ಮಣರು ಒಳಗೆ ಹೋಗಲು ಬಿಡರು. ನೀನು ಅಲ್ಲಿ ಕಾಣುತ್ತಿದೆಯಲ್ಲಾ ಆ ಗುಹೆಯಿಂದ ಒಳಗೆ ಬಾ. ಅದು ಗರ್ಭಗುಡಿಯ ವರೆಗೂ ತಲುಪುವುದು

ಬೀಬಿ—ಮೈ ಪುನೀತ್ ಹುಯೀ, ಮೈ ಪಾಕ್ ಹುಯೀ, ಮೈ ವೈಸಾಹೀ ಕರೂಂಗಿ. (ನಾನು ಪುನೀತಳಾದೆ, ನಾನು ಪವಿತ್ರಳಾದೆ, ನಾನು ಹಾಗೇ ಮಾಡುವೆನು) (ಹೋಗುವಳು. ಅವಳ ಹಿಂದೆ ಕುಬೇರನೂ ಹೋಗುವನು.)

ರಾಮಾನುಜ—ನಡೆಯಿರಿ, ಶೆಲ್ವನನ್ನು ನಾರಾಯಣನ ಸನ್ನಿಧಿಗೆ ತಲಪಿಸೋಣ.

(ಎಲ್ಲರೂ ಹೋಗುವರು. ದೇವಸ್ಥಾನಕ್ಕೆ ತಲಪುವರು. ಶೆಲ್ವನಿಗೆ ಆಗಮೋಕ್ತ ರೀತಿಯಲ್ಲಿ ಪ್ರತಿಷ್ಠಾಪನೆ ಮಾಡಿಸಿ, ಶ್ರೀಮನ್ ನಾರಾಯಣರ ಗರ್ಭಗುಡಿ ಯಲ್ಲಿಡುವರು. ಎಲ್ಲರೂ ವೇದ ಘೋಷಗಳನ್ನೂ, ಶ್ಲೋಕಗಳನ್ನೂ ಹೇಳುವರು. ಈ ಸಮಯಕ್ಕೆ ಸರಿಯಾಗಿ ಬೀಬಿ ಬಂದು ಭಗವಂತನಿಗೆ ಕೈ ಮುಗಿದು ತಲ್ಲೀನಳಾಗಿ ನಿಲ್ಲುವಳು. ಅಲ್ಲಿಂದ ಒಂದು ಜ್ಯೋತಿಯು ಹೊರಟು ಶೆಲ್ವನಲ್ಲಿ ವಿಲೀನವಾಗುವುದು, ಅವಳ ಚರ್ಮ ಶರೀರವು ಗುಹೆಯೊಳಗೆ ಬೀಳುವುದು.)

ದಾಶರಥಿ—ನೋಡಿದಿರಾ, ಜ್ಯೋತಿ ಶೆಲ್ವನಲ್ಲಿ ಐಕ್ಯವಾಯಿತು!

ಒಬ್ಬ ಭಾಗವತ—ಯಾರ ಜ್ಯೋತಿ, ಏಕೆ ಶೆಲ್ವನಲ್ಲಿ ಐಕ್ಯವಾಯಿತು?

ದಾಶರಥಿ—ಅದು ಭಕ್ತೆಯಾದ ಬೀಬಿಯ ಜ್ಯೋತಿ.

ರಾಮಾನುಜ—ಬೀಬಿಯು ಎಂಥಾ ಭಕ್ತೆ! ಆಂಡಾಳ್ ರಂಗನಾಥನಲ್ಲಿ ಐಕ್ಯವಾದ ಹಾಗೆ ಬೀಬಿ ಶೆಲ್ವನಲ್ಲಿ ಐಕ್ಯಳಾದಳು.

ಎಲ್ಲರೂ—ಆಹಾ! ಬೀಬಿ ಎಂತಹ ಭಕ್ತೆ? ಭಗವತ್ ಸಾನಿಧ್ಯ ಪಡೆದಳು!

ರಾಮಾನುಜ—ಭಗವಂತ ತನ್ನ ಭಕ್ತರನ್ನು ಎಂದೂ ಕೈ ಬಿಡ. ಭಕ್ತೆಯಾದ ಬೀಬಿಯ ಒಂದು ವಿಗ್ರಹವನ್ನು ಕಡೆದು ಭಗವಂತನ ಪದತಲದಲ್ಲಿಡೋಣ. ಇವಳಿಗೆ ಅಂದರೆ ಈ ವಿಗ್ರಹಕ್ಕೆ ಬೀಬೀ ನಾಚ್ಚಿಯಾರ್ ಎಂದು ಹೆಸರಿಡೋಣ.

ದಾಶರಥಿ—ಆಚಾರ್ಯರೆ, ಶೆಲ್ವನ ಪೂರ್ಣ ನಾಮಧೇಯವೇನು?

ರಾಮಾನುಜ—ಶೆಲ್ವಪಿಳ್ಳೆ, ಚೆಲುವರಾಯಸ್ವಾಮಿ ಎಂದು. ನೋಡಿದಿರಾ, ಭಗವಂತನಿಗೆ ಭಕ್ತರು ಬೇಕೇ ವಿನಃ ಜಾತಿಯಲ್ಲ ಅವನಿಗೆ ಜಾತಿಭೇದವಿಲ್ಲ. ಎಲ್ಲಾ ನಾವು ಮಾಡಿಕೊಂಡಿರುವುದು ಭಕ್ತಿಯ ಮುಂದೆ ಜಾತಿ ಏತರದು? ಕಲಿಯುಗದಲ್ಲಿ ಭಕ್ತಿಗೇ ಭಗವಂತನು ಒಲಿಯುವನೆಂಬುದಕ್ಕೆ ಬೀಬಿ ನಾಚ್ಚಿಯಾರೇ ನಿದರ್ಶನವು. ಬನ್ನಿ ನಾವೀಗ ಭಗವಂತನ ನಾಮ ಸ್ಮರಣೆ ಮಾಡುವ. ನಾರಾಯಣ ನಾಮದ ಮಹಿಮೆಯನ್ನು ಕೊಂಡಾಡುವ.



ನಾರಾಯಣ ನಾಮದ ಮಹಿಮೆಯನ್ನು ಕೊಂಡಾಡುತ್ತಿರುವುದು

# "ಓಂ" ನಮೋ ನಾರಾಯಣಾಯ

"ನಾರಾ", ಎಂದರೆ ಅಹುದು ಜೀವಿಯು ।
"ಅಯನ", ಎಂದರೆ ಅಹುದು ದಾರಿದೀವಿಗೆಯು ॥
"ಆಯ", ಎಂದರೆ ಸೇರಿರುವುದು ಆತಗೆ ।
"ನಮಃ", ಎಂದರೆ ಅಹುದರ್ಪಣೆ ಆತಗೆ ॥ ಓಂ ನಮೋ ॥

ಇರುವುದು ವೇದವೇದಾಂತಗಳ ಸಾರ ।
ಮೆರೆವುದು ಸೂಕ್ತಿ ಕ್ರಿಯಾಗಾನ ಸಾರ ॥
ಇಲ್ಲವು ಭೇದ ನಿರ್ಗುಣ ಸಗುಣದಲಿ ।
ತೋರುವುದು ದಾರಿಯ ಭಕ್ತಿಯಲಿ ॥ ಓಂ ॥

'ಓಂ' ಎಂಬುದರಲುಂಟು ಮೂರಕ್ಷರವು ।
'ಅಕಾರ', 'ಉಕಾರ'. 'ಮಕಾರ'ವೇ 'ಓಂ' ಅಕ್ಷರವು ॥
ಅಕಾರವಿಲ್ಲದೆ, ಅಕ್ಷರದ ಮಹಿಮೆ ಇಲ್ಲವು ।
ಇಲ್ಲದೆ 'ಓಂ', ಶಬ್ದ ಲಭಿಸದು ಮೋಕ್ಷವು ॥ ಓಂ ॥

ಇದಕೆ ಇಲ್ಲವು ಭೇದ ನಾಲ್ಕಾಶ್ರಮ ಜಾತಿಗಳ ।
ಇದಕೆ ಇಲ್ಲವು ಲಿಂಗಭೇದ ವಯೋಮಿತಿಗಳ ॥
ಇಹುದಿದಕೆ ಹಿರಿಮೆಯು, ಲಕ್ಷ್ಮೀಪತೀತ್ವದ ।
ಇಹುದಿದಕೆ ಭಗವಂತರೂಪವು, ಚೇತನಾಚೇತನಗಳಿಂದ ॥ ಓಂ ॥

ಆರುಹಿಹರು ದ್ವೈತ ಸಾಧಕರಿದನು ।
ಆರುಹಿಹರು ಅದ್ವೈತ ಸಾಧಕರಿದನು ॥
ಅರುಹಿಹರು ವಿಶಿಷ್ಟಾದ್ವೈತ ಸಾಧಕರಿದನು ।
ಅರುಹಿಹರು ನಾರಾಯಣ ಮಂತ್ರವೇ ।
ಪಾಪಹಾರಕ, ಮುಮುಕ್ಷು ಸಾಧಕವೆಂದು ॥ ಓಂ ॥

ಸಾರಿಹುದು, ರಾಮಾಯಣ ಇದನೇ ।
ಸಾರಿಹುದು, ಮಹಾಭಾರತ ಇದನೇ ॥
ಸಾರಿಹುದು, ಶ್ರೀ ಭಾಗವತ ಇದನೇ ।
ಸಾರಿಹುದು, ಪುರಾಣಗಳು ಇದನೇ ॥ ಓಂ ॥

ನಾಮ ಮಂತ್ರವೇ, ಕಲಿಯುಗದಲಿ ।
ಸಂಘ ಭಜನೆಯೇ, ಕಲಿಯುಗದಲಿ ॥
ಭಕ್ತಿ ಬೀಜವೇ, ಕಲಿಯುಗದಲಿ ।
ಫಲಧಾಯಕ ಮೋಕ್ಷವು ನಾಮದಲಿ ॥ ಓಂ ॥

ಕಲಿಯುಗದ ಮನುಜನ ನಾಲಿಗೆಯಲುಲಿಯಲಿ ।
ನಾರಾಯಣ ಬಹುನಾಮಾಮೃತ, ಬಹುವಿಧದಲಿ ॥
ಕೋಟಿ ಕೋಟಿ ಪಾಪಗಳು ಕ್ಷಣದಲಿ ಕಳೆಯಲಿ ।
ಕೋಟಿ ಕೋಟಿ ಜನುಮಗಳು ಕ್ಷಣದಳಲಿಯಲಿ ॥ ಓಂ ॥

(ತೆರೆ ಬೀಳುವುದು)

ಮಂಗಳಂ.





ಮೇಲುಕೋಟೆಯಲ್ಲಿ ನೆಲೆಸಿರುವ ಶ್ರೀ ರಾಮಾನುಜರ ಅರ್ಚಾವತಾರದ ವಿಗ್ರಹ

# ತಪ್ಪು ಒಪ್ಪು

| ಅಶುದ್ಧ | ಶುದ್ಧ | ಪುಟ | ಸಾಲು |
|---|---|---|---|
| ಕಲ್ಪ | ಕಲ್ಪಿ | 5 | 17 |
| | ( ) | 5 | 11 |
| ಆಗ | ಆರ | 8 | 11 |
| ನೋಡಿ | ಮಾಡಿ | 10 | 16 |
| ಬಾಗಿಲಲ್ಲಿ | ಮನೆ ಬಾಗಿಲಲ್ಲಿ | 15 | 30 |
| ಸ್ತುತಿ ವಿಷಯಕವಾದ 12000 ಪದ್ಯಗಳ ಜಪ ಮಾಡಿದರು | ನಮ್ಮಾಳ್ವಾರ ಸ್ತುತಿಯನ್ನು 12000 ಸಲ ಜಪಮಾಡಿದರು | 18 | 51 |
| ತಮ್ಮ ನಾಲ್ಕು ಸಾವಿರ | ನಾಲ್ಕು ಸಾವಿರ | 20 | 51 |
| ಏಕೆ | ಬೇಕೆ | 12 | 67 |
| ಶೇಷಿ | ಶೇಷ | 73 | 21 |
| ಅಂಶಿ | ಅಂಶ | 73 | 15 |
| ನನ್ನನ್ನು | ನಮ್ಮನ್ನು | 120 | 5 |